# ಮುದ್ದನ ಮಾತು

ಬರೆದವನು

"ಆನಂದಕಂದ"



ಪಿ. ಟಿ. ಐ. ಬುಕ್ ಡಿಪ್ರೊ

ಬಸವನಗುಡಿ, ಬೆಂಗಳೂರು

# ಪರಿವಿಡಿಯು





# ಮುನ್ನುಡಿ

ಕೆಲವು ತಿಂಗಳ ಹಿಂದೆ ಕವಿಭೂಷಣ ಬೆಟಗೇರಿಯವರು ಈ ಕಾವ್ಯದ ಕೆಲವು ಪದ್ಯಗಳನ್ನು ನನಗೆ ಓದಿ ಹೇಳಿದರು. ಆಗ ನನಗೆ ಉಂಟಾದ ಅತಿಶಯವಾದ ಸಂತೋಷವನ್ನು ನಾನು ಅವರಿಗೆ ಸ್ವಲ್ಪ ಮಟ್ಟಿಗೆ ತಿಳಿಸಿದೆನು. ತನ್ನ ಮಗುವನ್ನು ಮೆಚ್ಚಿ ಮುದ್ದಿಡುವ ಸ್ವಲ್ಪ ಹಿರಿಯ ಗೆಳತಿಯನ್ನು ಕುರಿತು ಅದರ ತಾಯಿ ಎತ್ತಿಕೋ ಅಕ್ಕಾ ಎಂದು ಹೇಳುವಂತೆ ಅವರು ಇದಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದರು. ಕಾವ್ಯದ ಮೇಲಣ ಮೆಚ್ಚಿಗೆಯಿಂದಲೂ ಅವರು ನನ್ನಲ್ಲಿ ತೋರಿದ ವಿಶ್ವಾಸಕ್ಕೆ ತಕ್ಕಂತೆ ನಡೆಯಬೇಕೆಂಬ ಆಸೆಯಿಂದಲೂ ಆ ಕೆಲಸಕ್ಕೆ ನಾನು ಒಪ್ಪಿಕೊಂಡೆನು.

ಈ ಕಾವ್ಯವು ಕನ್ನಡದಲ್ಲಿ ಹೊಸಮಾದರಿಯದು. ಮಕ್ಕಳೆಂದರೆ ನಮಗೆಲ್ಲ ಪ್ರೀತಿಯುಂಟು. ತಂದೆತಾಯಿಯಾದವರೆಲ್ಲ ಒಂದು ಸಲವಾದರೂ ತಮ್ಮ ಮಗು ಹೇಳಿದ ಮಾತನ್ನೋ ಆಡಿದ ಆಟವನ್ನೋ ಇತರರಿಗೆ ಹೇಳಿಕೊಂಡು ಸಂತೋಷ ಪಡುವರು. ಆದರೆ ಅಂಥ ಮಾತನ್ನೂ ಆಟವನ್ನೂ ಬಹುಕಾಲ ನೆನಪಿನಲ್ಲಿಟ್ಟುಕೊಳ್ಳುವ ತಂದೆಯಾಗಲಿ ತಾಯಾಗಲಿ ಅಪೂರ್ವ. ಅದನ್ನು ಒಂದು ಪದ್ಯದಲ್ಲಿ ವರ್ಣಿಸುವವರಂತೂ ಇಲ್ಲವೇ ಇಲ್ಲವೆನ್ನಬಹುದು. ನಮ್ಮ ಹಿಂದಣ ಕಾವ್ಯಗಳಲ್ಲಿ ಮಕ್ಕಳ ವಿಚಾರವಾದ ಕೆಲವು ವರ್ಣನೆಗಳುಂಟು. ಅವು ಕಾವ್ಯದ ಧಾಟಿಯಲ್ಲಿ ಬರೆಯಲ್ಪಟ್ಟಿವೆ. ದಾಸರು ಬರೆದ ಬಾಲಕೃಷ್ಣಪರವಾದ ಗೀತೆಗಳಲ್ಲಿ ಗೋಪಿಕಾ ವಿನೋದದ ವಿಷಯವೇ ಹೆಚ್ಚು. ಇವು ಉತ್ತಮವಾದ ಕಾವ್ಯಗಳೇ. ಆದರೆ ಇಲ್ಲಿ ಎಲ್ಲಮಕ್ಕಳ ಸಾಮಾನ್ಯವಾದ ಮಾತು ಆಟದ ವರ್ಣನೆ ಬಂದ ಹಾಗಾಗಲಿಲ್ಲ. ಈ ಸಾಮಾನ್ಯದ ಮಾತೂ ಆಟವೂ ಕಾವ್ಯಕ್ಕೆ ವಸ್ತುವೇ. ಏಕೆಂದರೆ ಅವು ನಮ್ಮ ಮನಸ್ಸಿನಲ್ಲಿ

ಸಂತೋಷವನ್ನೂ ಮೆಚ್ಚಿಗೆಯನ್ನೂ ಕನಿಕರವನ್ನೂ ಉಂಟು ಮಾಡುತ್ತವೆ. ಅವುಗಳ ಸಹಜವಾದ ವರ್ಣನೆಯು ರಸಾತ್ಮಕ ವಾಗುವುದಕ್ಕೆ ದಾರಿಯುಂಟು ; ಅವನ್ನು ಹಾಗೆ ವರ್ಣಿಸುವ ಕೃತಿಯು ಕಾವ್ಯವಾಗುವುದು. ಈ ವಸ್ತುವನ್ನು ಈ ರೀತಿಯಲ್ಲಿ ಉಪಯೋಗಿಸುವುದು ನಮ್ಮ ಸಾಹಿತ್ಯದಲ್ಲಿ ಹೊಸದಾರಿ. ಕವಿ ಭೂಷಣರು ತಮ್ಮ ಕೃತಿಯಲ್ಲಿ ಈ ವಸ್ತುವನ್ನು ಬಹಳ ಚೆನ್ನಾಗಿ ಉಪಯೋಗಿಸಿದ್ದಾರೆ.

ಕಾವ್ಯದ ವಸ್ತು ಮುದ್ದನ ದಿನದಿನದ ಆಟಪಾಟವಾದದ್ದ ರಿಂದ ಕಾವ್ಯದ ಭಾಷೆಯೂ ವೃತ್ತವೂ ಅದಕ್ಕೆ ಅನುಗುಣವಾಗಿವೆ. ಮುದ್ದನಾಡಿದನೆಂಬ ಮಾತು ಅವನ ವಯಸ್ಸಿಗೆ ತಕ್ಕದ್ದಾಗಿರ ಬೇಕು. ಸಮಾಸ ಪದಗಳನ್ನು ಸೇರಿಸಿ ಮಹಾಸ್ರಗ್ಧರಾದಿ ವೃತ್ತ ಗಳಲ್ಲಿ ಅವನು ಏನೆಂದನೆಂದು ಬರೆದರೆ ಮಾತು ಮುದ್ದನದಾಗ ಲಾರದು ; ಮುದ್ದನ ಮಾತಿನ ವಿಷಯವನ್ನು ಬೇರೆಯ ಮಾತಿನಲ್ಲಿ ಹೇಳಿದಂತೆ ಆಗುವುದು. ಮಗುವಿನ ಮಾತಿನಲ್ಲಿಯ ಸೊಗಸು ಅದರ ವಿಷಯವನ್ನು ಮಾತ್ರವಲ್ಲ, ರೀತಿಯನ್ನೂ ಅವಲಂಬಿಸಿದೆ. ಅದಕ್ಕೆ ಸಮಾಸ ಪದಗಳು ಮಾತ್ರವಲ್ಲ, ಪದಸಂಧಿಯೂ ದೂರ, ಅದರಲ್ಲಿ ಬರಿಯ ತೊದಲೂ ಚೆನ್ನವೇ. ಆ ತೊದಲನ್ನೂ ಬರೆವಣಿಗೆಯಲ್ಲಿ ತಂದರೆ ಚೆನ್ನಾಗಿದ್ದೀತು. ಅದು ಆಗಲಿಲ್ಲವನ್ನಿ, ಮಾತಿನ ಸರಳತೆ ಯನ್ನಾದರೂ ತರಬೇಕು ; ಮಗುವಿನ ಭಾವನೆ ಎಷ್ಟು ಅಚ್ಚ ವೆಂಬುದನ್ನು ಸಾಧ್ಯವಾದಷ್ಟು ಮಟ್ಟಿಗೆ ತೋರಿಸಬೇಕು. ಅದು ಆಡುವ ಮಾತಿನ ರೀತಿಯ ಅನುಕರಣವು ಇದರಲ್ಲಿ ಅವಶ್ಯಕ. ಇಲ್ಲಿ ರೀತಿಯನ್ನು ಬಿಟ್ಟರೆ ಕಾರ್ಯ ಸಿದ್ಧಿಸದು. ಈ ಕೆಲಸ ಚಿತ್ರದ ಕೆಲಸ. ಸ್ವಭಾವಕ್ಕೆ ಸಮೀಪವಾಗಿರುವುದು ಈ ಕೆಲಸದಲ್ಲಿ ಸಿದ್ಧಿಗೆ ಮುಖ್ಯಸಾಧನ. ಆದ್ದರಿಂದ ಈ ಕಾವ್ಯದಲ್ಲಿ ಭಾಷೆ ಮಗುವಿನ ದಿನದ ಭಾಷೆಯಾಗಿದೆ ; ವೃತ್ತವು ಅದನ್ನು ಒಳಗೊಳ್ಳಬಹುದಾದ ಒಂದು ಕನ್ನಡದ ವೃತ್ತವಾಗಿದೆ.

ಈ ವೃತ್ತವು ಕನ್ನಡದ್ದೇ ಎಂದು ಕೆಲವರು ಕೇಳುವುದು ನಿಜ. ಹೌದೆಂದೇ ನನ್ನ ಭಾವನೆ. ಇದು ಹೇಗೆಂದು ಚರ್ಚೆಗೆ ಈ ಮುನ್ನುಡಿ

ಯಲ್ಲಿ ಅವಕಾಶವಿಲ್ಲ. ಒಂದು ಮಾತನ್ನು ಮಾತ್ರ ಹೇಳಬಹುದು. ಇಲ್ಲಿಯ ಪಙ್ಕ್ತಿಗಳು ಪ್ರಾಯಶಃ ಯಾವುದಾದರೊಂದು ಷಟ್ಪದಿಯ ಸಣ್ಣಪಙ್ಕ್ತಿಗಳು. ಪದ್ಯ ಆರು ಪಾದಕ್ಕೆ ಮುಗಿಯುವುದಿಲ್ಲ; ಚೌಪದಿ ಅಷ್ಟಪದಿಗಳಂತೆ ಅಥವಾ ರಗಳೆಗಳ ವೃತ್ತಗಳಂತೆ ಮುಂದಕ್ಕೆ ನಡೆಯುವುದು. ಆದರೆ ಆ ನಡೆ ಸುಲಭವಾಗಿದೆ, ಓದಿಗೆ ಹಿತವಾಗಿದೆ. ಎಂದರೆ ಅದು ಛಂದಸ್ಸಿನ ಮೂಲಸೂತ್ರಕ್ಕೆ ವಿರೋಧಿಯಾಗಿಲ್ಲ, ಅದನ್ನು ಅನುಸರಿಸಿದೆ. ಪದ್ಯದ ಕಟ್ಟಡ ಹಿಂದಿನ ಕವಿಗಳವಲ್ಲ ; ಆದರೆ ಅದರ ಇಟ್ಟಿಗೆ ಅವರು ಉಪಯೋಗಿಸಿದ ಅಚ್ಚಿನದೇ.

ಇನ್ನು ಕಾವ್ಯದ ಗುಣಕಥನವನ್ನು ಮಾಡುತ್ತ ಈ ಮುನ್ನುಡಿಯನ್ನು ಬೆಳೆಯಿಸಲು ನನಗೆ ಇಷ್ಟವಿಲ್ಲ. ಓದುವವರು ಮಕ್ಕಳನ್ನು ಕಂಡೇ ಇದಾರೆ, ಅವುಗಳ ಮಾತನ್ನು ಕೇಳಿದಾರೆ. ಅವುಗಳ ಆಟಗಳನ್ನು ನೋಡಿ ಆನಂದ ಪಟ್ಟಿದಾರೆ; ಅವು ಅಳುತಿರಲು ಮರುಕಗೊಂಡು ಎತ್ತಿಕೊಂಡಿದಾರೆ. ಕೆಲವರು ಒಂದೊಂದು ಸಲ ಈ ಎಳಸಾದ ಮನಸ್ಸು ಈ ಕಠಿಣವಾದ ಪ್ರಪಂಚಕ್ಕೆ ಬರಲೇಕೆ ? ಇಲ್ಲಿ ಬೆಳೆದು ಬಿರುಸಾಗಿ ಖೇದಗಳಿಗೆ ಸಿಕ್ಕಲೇಕೆ ?—ಎಂದು ಯೋಚಿಸಿರುವರು. ಸಮಸ್ಯೆಗೆ ಕೊನೆ ತಿಳಿಯದೆ ಒಂದು ಕ್ಷಣ ನೊಂದಿರುವರು. ಈ ಕಾವ್ಯವನ್ನು ಓದುವಲ್ಲಿ ಸ್ವಭಾವವಾಗಿಯೂ ಪ್ರೀತಿವಂತರಾದ ತಂದೆತಾಯಿಗಳು ತಮ್ಮ ಮಕ್ಕಳ ಮಾತು ಆಟವನ್ನು ಇದರಲ್ಲಿ ಗುರುತಿಸಿದರೂ ಸರಿಯೆ ; ಮಕ್ಕಳ ಮಾತಿಗೆ ಅಷ್ಟು ಗಮನ ಕೊಡದವರು ತಮ್ಮ ಮಗುವೂ ಇಂತ ಮಾತನ್ನಾಡುವುದೇನೋ ಎಂದು ಅದನ್ನು ಇನ್ನಷ್ಟು ಗಮನದಿಂದ ನೋಡುವುದಾದರೂ ಸರಿಯೆ ; ಯೋಚನಾ ಪರರು ವರ್ಡ್ಸ್‌ವರ್ತ್ ಕವಿಯಂತೆ ಇದರಿಂದ ಹೊಸ ತತ್ತ್ವದ ಕಟ್ಟಡವೊಂದನ್ನು ಕಟ್ಟುವುದಾದರೂ ಸರಿಯೆ ; ಇಲ್ಲವೇ ತಮ್ಮನ್ನು ಮಗುವೆಂದೂ ದೇವರನ್ನು ತಾಯೆಂದೂ ನೆನೆದು ತಾವು ಸಂಸಾರದಲ್ಲಿ ಪಡುತ್ತಿರುವ ಸುಖದುಃಖದ ಅನುಭವಗಳಿಗೆ ಮುದ್ದಿನ ಮಾತುಗಳನ್ನು ಅನ್ವಯಿಸಿಕೊಂಡರೂ ಸರಿಯೆ ; ಅವರು ಕಾವ್ಯದಿಂದ ಒಂದು ರೀತಿಯ ಫಲವನ್ನು ಪಡೆ

ದಂತಾಯಿತು. ಆಗ್ಗೆ ಕವಿಯು ಈ ಕೃತಿಯನ್ನು ರಚಿಸಿದ್ದು ಸಾರ್ಥಕವಾಯಿತು.

ಈ ಕಾವ್ಯವನ್ನು ಓದುವವರು ಯಾರಾದರೂ ಕವಿಯು ಠಾಕೂರರವರ ಕ್ರೆಸೆಂಟ್ ಮೂನ್ ಕಾವ್ಯವನ್ನು ನೋಡಿ ಇದನ್ನು ಬರೆದಿರಬಹುದೆಂದು ಭಾವಿಸುವ ಸಂಭವವುಂಟು. ಠಾಕೂರರಂಥ ಹಿರಿಯರ ದೀಪದಿಂದ ತಮ್ಮ ದೀಪವನ್ನು ಹಚ್ಚಿಕೊಳ್ಳಲು ಯಾರೂ ನಾಚಿಕೊಳ್ಳಬೇಕಾದದ್ದಿಲ್ಲ. ಆದರೆ ಕವಿಭೂಷಣರು ಇಂಗ್ಲೀಷು ಕಲಿತವರಲ್ಲವೆಂದೂ ಬಂಗಾಳಿಯನ್ನರಿಯರೆಂದೂ ನಾನು ಕೇಳಿದೇನೆ. ಅವರು ಕ್ರೆಸೆಂಟ್ ಮೂನ್ ಎಂಬ ಈ ವಿಷಯದ ಕಾವ್ಯವಿದೆಯೆಂದು ಕೇಳಿರಬಹುದು. ಆದರೆ ಈ ಕಾವ್ಯವು ಅನುಕರಣದ ಫಲವಲ್ಲ; ಕವಿಯ ಹೃದಯದಿಂದ ಬಂದಿದೆ. ಇದರಲ್ಲಿ ನನಗೇನೂ ಆಶ್ಚರ್ಯ ತೋರುವುದಿಲ್ಲ. ಕನ್ನಡ ನಾಡಿನಲ್ಲಿ ಮಕ್ಕಳಿಲ್ಲವೆ? ಅವು ಆಡುವುದಿಲ್ಲವೆ? ಅವುಗಳನ್ನು ನೋಡಿ ನಾವು ಯಾರೂ ನಲಿಯುವುದಿಲ್ಲವೆ? ಈಚೆಗೆ ನೈಜವಾದ ಕವಿತೆಯನ್ನು ಕಾಣದ ನಮ್ಮ ಪ್ರಕೃತದ ದುರವಸ್ಥೆಯಲ್ಲಿ ಕವಿಯೊಬ್ಬನು ಬಂದರೂ ನಮಗೆ ಅವನಲ್ಲಿ ಸಂದೇಹ. ಆದರೆ ನಮ್ಮಲ್ಲಿ ಕೆಲಕಾಲದಿಂದ ನೈಜವಾದ ಕಾವ್ಯವಿಲ್ಲದೆ ಹೋಗಿದ್ದರೂ ಅದರ ವಸ್ತುವಾದ ಅನುಭವಕ್ಕೆ ಶೂನ್ಯತೆ ಬಂದಿರಲಿಲ್ಲ. ಆ ಅನುಭವವು ನಿತ್ಯವಾದುದು, ಸರ್ವಜನ ಸುಲಭವಾದುದು. ಬೇಡಿದಂದು ಕಾವ್ಯವಾಗಲು ಅದು ಸದಾ ಸಿದ್ಧವಾಗಿರುವುದು.

ಬೆಂಗಳೂರು ಪ್ರಭವ ಸಂ||
ಆಷಾಢ ಬಹುಳ ಪಂಚಮಿ.

**ಶ್ರೀನಿವಾಸ.**

# ಗುಮ್ಮ



“ ಕರೆದುಕೊಳ್ಳುವುದಿಲ್ಲ ನಡೆ ! ನಿನ್ನನಾಟಕ್ಕೆ ”
ಬಿರುನುಡಿಗಳಿಂದಿಂತು ಅಕ್ಕ ಹೇಳಿದಳೆನಗೆ
“ ಕರೆದು ಕೊಳದಿರಲು ನಿನ್ನೊಲ್ಲ ಆಟವನು
“ ಮುರಿದು ಬಿಡುವೆನು ” ಎಂದು ನಾನು ಹೇಳಿದೆನು.
“ ಮುರಿದ ಕೂಡಲೆ ಗುಮ್ಮ ಬರುವನವ ನಿನ್ನನ್ನು
“ ಮುರಿದು ನುಂಗಲು ” ಎಂದು ಅಕ್ಕನಂಜಿಸಿದಳೌ !
“ ಗುಮ್ಮ ಬಂದರೆ ಅಮ್ಮನೆಡೆಗೆ ಹೋಗುವೆನು ”
ಎಂದು ಅಕ್ಕನಿಗೆ ಮರುಮಾತನಾಡಿದೆನು.
“ ಅಲ್ಲಿ ಬರಲಿಕ್ಕೇನು ಅಂಜಿಕೆಯು ಆತನಿಗೆ ?
“ ಎಲ್ಲ ಕಡೆಗೂ ಬರಲು ಬಲ್ಲನಾ ಕರಿಗುಮ್ಮ ”
ಇಂತು ಹೇಳಿದಳಕ್ಕ ನನ್ನನಂಜಿಸಲು
ಚಿಂತೆಮಾಡದೆ ನುಡಿದೆ ಗಟ್ಟಿಮನಸಿನೊಳು.
“ ಅಮ್ಮ ತೊಡೆಯೊಳಗಿರಿಸಿ ತನ್ನ ಮುಂಜೆರಗಿಂದೆ
“ ನನ್ನ ಮೆಯ್ಯನು ಮುಚ್ಚಿ ಮರೆಮಾಡುವಳು ” ಎಂದೆ
“ ಅಂತು ಮಾಡದೊಲು ಅಮ್ಮನಿಗೆ ಹೇಳುವೆನು ”
ಇಂತಕ್ಕನೆನಲಂಜಿ ಓಡಿ ಬಂದಿಹೆನು.
ಗುಮ್ಮನಿಲ್ಲಿಯು ಬಂದರಾಗ ತೊಡೆಮಡಿಲಲ್ಲಿ
ಅಮ್ಮ ನೀನೆನ್ನ ಮಲಗಿಸಿಕೊಂಡು ಮೇಲುದುವ
ಹೊದ್ದಿಸುತೆ ಮರೆಮಾಡಿ ಮುಚ್ಚಿಡುವೆಯೇನೆ ?
“ ಮುದ್ದನಿಲ್ಲಿಲ್ಲ ನಡೆ ” ಎಂದೆನುವೆಯೇನೆ ?

---

# ತೊಡೆಮುಡಿಲು



ಎನಿತು ಕೋಮಲ! ಎನಿತು ಮಿದು! ನಿನ್ನಮೈಯ್ಯಿಹುದು?
ಎನಿಸುವುದು ನನಗೆ "ಮೂಳೆಗಳಿಲ್ಲವೋ"! ಎಂದು
ಒರಗಿಕೊಂಡಿರೆ ನಾನು ಅಕ್ಕನಾತೊಡೆಗಳೊಳು
ಬಿರುಸುಬಿರುಸಾಗಿ ಆಕೆಯ ಕಾಲ ಮೂಳೆಗಳು
ಮೈಯ್ಗೆ ಚುಚ್ಚುತೆ ನೋಯಿಸುವವು ಮೊನೆಮುಳ್ಳಿನೊಲು
ನಿನ್ನ ತೊಡಮುಡಿಲೆನಿತು ಮೆಲ್ಲಿತಾಗಿಹುದೆ?
ನನ್ನಂಚೆಗರಿಯ ಗಾದೆಯು ಹಿಂಚಿಸುವುದೆ!
"ಮಲ್ಲಿಗೆಯ ಮಾಂದಳಿರ ಹಾಸು ಮೆಲ್ಲಿತು" ಎಂದು
ಒಳ್ಳೆ ಹೊಗಳಿದೆ ಕತೆಯ ಹೇಳುತಿರೆ ನೀನಂದು,
ಒಲ್ಲೆನಮ್ಮಾ! ಬೇಡ! ಅವುಗಳೆನಗೆಂದೆಂದು,
ನಿನ್ನ ತೊಡೆಯಿಂದೆ ಮಿಕ್ಕೆಲ್ಲವೂ ಎಡವೆಂದು
ನನ್ನ ಬಗೆಗೇನೊ ಕಾಣುತಲಿಹುದೆ! ಇಂದು.
ಪಡುಗೆಯನು ನಿನ್ನ ತೊಡೆಮುಡಿಲಂತೆ ಮಾಡಿಸಲು
ಒಡವೆಗಳು ಏನೇನು ಬೇಕೆಂಬುದನು ಹೇಳು!

---

# ನಿದ್ದೆ



ಅಮ್ಮ ಎಂತವಳೆ ನೀನು !
ನಿನ್ನ ತೊಡೆಮಡಿಲಲ್ಲಿ ಮಲಗಿರಲು ನಾನು
ನನ್ನಿಯೊಳ್ ಹಾಯಾಗಿ ನಿದ್ದೆ-ಹೋಗುವೆನು.
ನಿದ್ದೆಯಲ್ಲಿರೆ ನಾನು ಮಲಗಿಸುವೆ ಕೆಳಗೆ
ಎದ್ದು ಹೋಗುವೆಯೆ ನೀ ಮನೆಗೆಲಸಕೊಳಗೆ.
ಕೆಳಗೆ ಮಲಗಿಸೆ ಕೆಟ್ಟ ಕನಸ ಕಾಣುವೆನು.
ಕಳವಳಿಸಿ ನಿದ್ದೆಯೊಳು ಬೆಚ್ಚಿ ಬೀಳುವೆನು.
ಎಚ್ಚತ್ತು ಕಣ್ದೆರೆದು "ಅಮ್ಮ" ಎನ್ನುವೆನು.
ಹುಚ್ಚನಾನಲ್ಲಿ ನಿನ್ನನು ಕಾಣದಿಹೆನು.
ನಾನಿನ್ನು ನಿದ್ದೆಯನು ಮಾಡೆನೆಂದೆಂದು.
ನೀನೆನ್ನ ಕೆಳಗೆ ಮಲಗಿಸುವೆ ಎಂತಿಂದು ?

---

# ಹಂಚಿಕೆ



ಅಕ್ಕ ನಿನ್ನೆಡೆಗೆ ಬಾರದೆ ನಿರುತ ನೆರೆಹೊರೆಯ
ಮಕ್ಕಳೊಡನಾಟದಲ್ಲಿಯೆ ದಿನವ ಕಳೆಯುವಳು.
ಏನಾದರೊಂದು ಒಡವೆಯು ಬೇಕಿರಲು ಅಕ್ಕ
ತಾನೆ ಬಂದಳುತೆ ಹಟಮಾಡಿ ಪಡೆಯುವಳದನು.
ಅವಳ ನೀ ತೊಡೆಯಲ್ಲಿ ಒರಗಿಸಿಕೊಳುವುದಿಲ್ಲ.
ಮುದ್ದನೀಯುವುದಿಲ್ಲ ಮುಂಡಾಡುವುದೆ ಇಲ್ಲ.
ಇಂತೇಕೆ ? ಅವಳಿಂದು ಬಳೆದಿರುವಳೆಂದೇನು ?
ಅಂತಿರಲು ನಾನಾದರೂ ಬಳೆಯೆ ನನಗಂದು
ನಿನ್ನೆಡೆಗೆ ಬರಲು ಮನ ಮೆಚ್ಚದೇನೌ ? ಮತ್ತೆ
ನನ್ನನೀ ತೊಡೆಯಲ್ಲಿ ಪಡುಹಿಕೊಳ್ಳುವುದಿಲ್ಲೆ ?
ಇಂತಾಗೆ, ಕೊನೆತನಕವೂ ನಾನು ಬಳೆಯದಲೆ
ಎಳೆಯನಾಗಿರುವುದಕೆ ತಿಳಿಸಮ್ಮ ! ಹಂಚಿಕೆಯ.

---

# ಮುಂದಿಯ ಕಾಟ



ನೋಡಮ್ಮ ! ಕೆಟ್ಟವೋರೆಯುಮುಂದಿ ನನ್ನನ್ನು
ಕಾಡುತಿಹರೇಕಿನಿತು ? ಕಾರಣವದೇನು ?
" ಚೆಂಡುಮಲ್ಲಿಗೆಯುರಳ ಚೆಂದಚೆಂದದಿ ಸಮೆದು
" ದಂಡೆಗಳ ಮಾಡಿ, ದುಂಡಾದ ನಿನ್ನಯ ಮೆಯ್ಗೆ
" ಮುಡಿಸುವೆವು ಬಾ " ಎಂದು ಮಾಲೆಗಾತಿಯುರು
ಬೆಡಗಿನಿಂದಲಿ ಬಂದು ನನ್ನ ಕರೆಯುವರು.
" ಪುಟ್ಟಕಿಟ್ಟನಿಗಂದು ದಿಟ್ಟಗೋಪಿಯರೆಲ್ಲ
" ಕೊಟ್ಟಂತೆ ಕೆನೆವಾಲ ಕುಡಿಯಲೀಯುವೆವು ಬಾ "
ಎಂದು ಗೋವಳತಿಯುರು ಸವಿಮಾತನಾಡಿ
ಬಂದೆನ್ನ ಕರೆಯುವರೆ ಬಲುಮೆಯನು ಮಾಡಿ.
" ನಿನ್ನ ಮಾತೆಯ ಮುದ್ದಿನಿಂದಲೂ ಮಧುರವಹ
" ಹಣ್ಣುಹಂಪಲ ನಿನಗೆ ತಿನ್ನಲೀಯುವೆವು ಬಾ "
ತೋಟಗಿತಿಯುರು ಇಂತು ಕರೆದು ಕಾಡುವರು.
ಮಾಟಗಾರಿಕೆತನದ ಮಾತನಾಡುವರು.
" ಅಮ್ಮನಿನಿನುಡಿಯಿಂದೆ ಇನಿದಾಗಿರುವ ಕೊಳಲ
" ತಮ್ಮ ! ನಿನಗೂದಲಿಕೆ ಕಲಿಸುವೆವು ಬಾಬಾರೊ "
ಕರುಗಾಹಿಗಳು ಇಂತು ಅರುಹಿ ಕರೆಯುವರೆ !
ಬರಿದೆ ನನಗಿಂದು ಕರಕರೆಯ ಮಾಡುವರೆ !
ಕೆಳೆಯುರೆಲ್ಲರು ಕೂಡಿ ಕರೆಯುವರು ನನ್ನನ್ನು
" ಕಳೆಮುಳಿಯ ಆಟ ಕುಂಬಳಕಾಯ ಆಟವನು
" ಆಡಿ ಕುಣಿದಾಡೋಣ ! ಬಾರೊ " ಎನ್ನುವರು.
ಕಾಡುತಲಿ ಕೈಗಳನು ಹಿಡಿದು ಸೆಳೆಯುವರು.

ಎಲ್ಲಿಯೂ ಹೋಗಲಿಕೆ ಒಲ್ಲೆನಮ್ಮಾ ! ನಾನು
ಇಲ್ಲಿಯೇ ನಿನ್ನ ತೊಡೆಯಲ್ಲಿಯೇ ಮನವಾರೆ
ಮಲಗಿಕೊಳಬೇಕೆಂಬೆ ! ಮಂದಿಯೆಲ್ಲವು ಕೂಡಿ
ಮಲಗಗೊಡಲೊಲ್ಲರಾ ! ಕರಿಕರೆದು ಕೂಗಾಡಿ.
ಮಂದಿಗೇಕಿನಿತು ಮನನೋವೊ ? ನಾಕಾಣೆ
ಮಂದಿಯಾ ಮನೆಗಂಟನೇನು ತಿಂದಿಹೆನೇ ?

೦

# ಕಣ್ಣಮುಚ್ಚಾಟ



ಒಲ್ಲೆನಿವರೊಡನಾಟವ ಅಮ್ಮಾ ! ನಾ-
ನೊಲ್ಲೆನಿವರೊಡನಾಟವ.
ಕಣ್ಣ-ಮುಚ್ಚಾಟಕ್ಕೆ ನನ್ನ ಕರೆದೊಯ್ಯುವರು.
ಕಣ್ಣನೆರಡೂ ಬಿಗಿದು "ನಮ್ಮ ಹಿಡಿ" ಎನ್ನುವರು.
"ನಾವು ಇಲ್ಲಿಹೆವು ಬಾ" ಎಂದು ಕರೆಯುವರು
ನಾನು ಹಿಡಿಯಲು ಹೋಗೆ ಸಿಗದೆ ಓಡುವರು.
ಮರುಳತನದಲಿ ಆಗ ಕುರುಡನಂದದಿ ನಾನು
ಅರಿಯದಲೆ ದಾರಿಯನು ತಿರುಗುತಿರೆ, ಮುಂದಲ್ಲಿ
ಕಲ್ಲುಗಳನಿಡುತೆನ್ನನೆಡವಿಸುವರು.
ಮಣ್ಣೊಳಗೆ ಬೀಳಿಸುತೆ ಹೊರಳಿಸುವರು.
ಕಣ್ಣುಗಳು ಕಾಣದಲೆ ಮಣ್ಣೊಳಗೆ ಹೊರಳಾಡಿ
ಬನ್ನಬಡುತಿರೆ ನಾನು, ಕೈತಟ್ಟಿ ಕೆಲೆಯುವರು.
ಕೂಗೆ ನಾನಿನ್ನ "ಅಮ್ಮಾ" ಎನುತಲಾಗ
ಹೋಗುವರು ಎಲ್ಲರಲ್ಲಿಂದೋಡಿ ಬೇಗ.
ಅದಕೆ ನಾನೊಲ್ಲೆನಿವರೊಡನಾಟವನ್ನು
ಎದೆಯು ನಡುಗುವುದು ಬಿಟ್ಟಳಿಯೆ ತೊಡೆಯನ್ನು.

# ಹುಡುಗತನ



ಬುರುಬುರೂ ಬಸವಣ್ಣನದೊ ? ಹಾವುಗಾರರದೊ ?
ಡೋಲ ಸಪ್ಪಳವಿದೇನೆ ?
ದುರಗ-ಮುರಗವ್ವನದೊ? ಕರಡಿಯಾಡಿಸುವರದೊ ?
ನಾ ಹೋಗಿ ನೋಡಲೇನೆ ?
ರಂಗುರಂಗಿನ ಬೊಗರಿ, ಚೆಂಡುಚಿಣಿಕೋಲುಗಳು,
ಬಂಗಾರ ಒಣ್ಣದಾನೆ,
ಅಂಗಡಿಯ ಬೀದಿಯಲಿ ಬಂದಿರುವವೆಂತಲ್ಲಿ
ನಾ ತರಲು ಹೋಗಲೇನೆ ?
ಗುಡಿಯ ಮುಂದಿನ ಗಿಡದಿ ಮಂಗ ಕುಳಿತಿಹುದೆಂತೆ,
ಹೋಗಿ ಕಲ್ಲೆಸೆದು ಬರಲೆ ?
ಹುಡುಗರೆಲ್ಲರು ಗುಬ್ಬಿಮನೆಮಾಡಿಯಾಡುವರು
ಹೋಗಿ ನಾ ಕೆಡಿಸಿ ಬರಲೆ ?
ಗೆಳತಿಯರೊಡನೆ ಗೊಂಬೆಯಾಟವಾಡುವಳಕ್ಕ
ನಾ ಹೋಗಿ ನೋಡಿ ಬರಲೆ ?
ಗೆಳೆಯರೆಲ್ಲರು ಕಣ್ಣಮುಚ್ಚಾಟವಾಡುವರು
ನಾ ಹೋಗಿ ಆಡಿ ಬರಲೆ ?
ಹೊಡೆಮರಳಿ ಬರಲೆನ್ನ ಪಡುಹಿಕೊಳ್ಳುವೆಯೇನೆ
ಮುನ್ನಿನಂತೆಯೆ ತೊಡೆಯಲಿ ?
ಬಿಡು ! ಬೇಡ ಬೇಡವ್ವ ! ಪಡುಹಿಕೊಳಲಿಕ್ಕಿಲ್ಲ
ಹೋಗೆನಾ ನಿನ್ನನಗಲಿ.



# ಹುಡುಗರಾಟ

ಅಮ್ಮ! ನಾ ಹುಡುಗರೊಡನಾಟವಾಡಿದರೆ
ಸುಮ್ಮಸುಮ್ಮನೆ ನನ್ನ ಗಾಸಿಗೊಳಿಸುವರೆ!
ಗಾಸಿಗೊಳಿಸುವ ಗೆಳೆಯರೊಡನಾಟವೇನು?
ಅದರಿಂದೆ ನಿನ್ನ ಸಂಗಡವೆ ಆಡುವೆನು.
ನೀನಾಗು ಗಾಣ, ನಾನಾಗುವೆನು ಎತ್ತು.
ನನ್ನ ಕೈಹಿಡಿದು ತಿರುಗಿಸಿ ಸುತ್ತುಮುತ್ತು.
"ಹಲೆ ಹಲೇ! ನಡೆ" ಎಂದು ಹೆದರಿಸಮ್ಮ!
"ಗಾಣಗಸಿ ಎಣ್ಣೆಬಸಿ" ಆಡಿಸಮ್ಮ!
ಇಲ್ಲವೇ ನಿಲ್ಲು ನೀ ನಡುಗಂಬವಾಗಿ,
ನಿನ್ನ ಮೆಯ್ಯನು ಹಿಡಿದು ಸುತ್ತಲೂ ತಿರುಗಿ
"ಕಂಬಕಂಬಾಟ ನಿಂಬೀತೋಟ"ದಾಟಾ
ಆಡುವೆನು ನೋಡೆ! ನೀನೆನ್ನ ಓಡಾಟಾ.
ಕೆಳಗೆ ನಾನಿಳಿದರೂ ಬಳಿಯಲಿಯೆ ಇರುವೆ.
ನಾನಾಡುತಿರಲು ನೀ ನಡುವೆ ನಿಂತಿರುವೆ.
ನಿನ್ನ ಮೈಕೈಗಳನು ಹಿಡಿದಿರುವೆ ನಾನು.
ನನ್ನ ತಪ್ಪಿಸುತೆ ಹೋಗುವೆ ಹೇಗೆ ನೀನು?
ನಾನು ಆಟವನಾಡಿ ಸಾಕಾಗಿ ಬಳಲಿ
ನಿನ್ನ ತೊಡೆಯೊಳು ಮಲಗುವೆನು ಬಂದು ಮರಳಿ.

# ತೊಡವು

ತೊಡವುಗಳ ತೊಡಕೇತಕೆ ? ಅವ್ಮ ! ಈ-
ಮುಡಿಗೆ-ಮೆಯ್‌ಮರೆಯೇತಕೆ ?
ಹೊರಗೆ ನಾನಾಡಿ ನಿನ್ನೆಡೆಗೋಡಿ ಬಂದು,
ಎರಡು ಕೈಗಳನಾತುರದಿ ನೀಡಿನಿಂದು,
ಬಿಗಿಯಾಗಿ ನಿನ್ನನ್ನು ಅಪ್ಪಿಕೊಳುತಿರಲು,
ವೈಗೊತ್ತಿ ಅಳುಕಿಪವು ಕಟ್ಟ ತೊಡವುಗಳು.
,, ಇನಿದಾದ ಬೆಲ್ಲಕೊಡು " ಎನ್ನುವೆಯೆ ನೀನು.
ನನ್ನ ಮೋರೆಯ ನಿನ್ನ ಮುಂದೆ ಮಾಡುವೆನು.
ಕೊಡಲು ಮುದ್ದನು ನೀನು ಬರುವೆ ಮುಂದರಿದು.
ಮುಡಿಗೆಯಲಿ ಮುಚ್ಚಿಹುದು ನನ್ನ ಗಲ್ಲವಿದು.
ನಿನ್ನ ತೊಡೆಮಡಿಲಲ್ಲಿ ನಾ ಮಲಗಿಕೊಂಡು.
ನಿನ್ನ ಕೈಯಿಂದೆನ್ನ ಮೆಯ್‌ದಡವಿಕೊಂಡು,
ಕಳೆದುಕೊಳಬೇಕೆಂಬೆ ನನ್ನ ಮೆಯ್-ದಣಿವ,
ನಡುವೆ ತೊಡರಾಗುವುದು ಮೆಯ್-ಮರೆಯಿದವ್ವ !
ಉಚ್ಚಿಬಿಡೆ ! ಅಸಲಿ ಹುಲಿಯುಗುರನರಳೆಲೆಯ.
ಬಿಚ್ಚಿಬಿಡೆ ! ರೇಶಿಮೆಯ ಮುಡಿಗೆ-ಮೆಯ್‌ಮರೆಯ.

---

# ಹಕ್ಕಿ-ಮರಿ

ಇನಿತು ಆತುರದಿ ಹೋಗುವವೆಲ್ಲಿ ಹಕ್ಕಿಗಳು ?
ಮನೆಯಲಿಹ ಮರಿಗಳನು ಮುದ್ದಿಸಲಿಕೇನವ್ಮ ?
ನೀರ ತರಲಿಕ್ಕೆಂದು ನೀ ಹೊರಗೆ ಹೋಗಿರಲು
ದಾರಿನೋಡುತೆ ನಾನು ಅಳುತೆ ಕುಳಿತಂದದಲಿ,
ಕೀರುಕೀರೆಂದೆನುತೆ ಹಕ್ಕಿ-ಮರಿಗಳು ತಾಯ
ದಾರಿಯನು ನೋಡುತಿರಬಹುದಲ್ಲವೇನವ್ಮ ?

ನೀನು ನದಿಯಿಂ ಬಂದು ನಾನಳುವುದನು ಕಂಡು,
ಏನ ಮಾಡುವುದೆಲ್ಲ ಬಿಟ್ಟೆನ್ನ ರಮಿಸುವೊಲು,
ಹಕ್ಕಿಗಳು ಮನೆಸೇರಿ ಮರಿಗಳನು ಮುದ್ದಿಟ್ಟು
ಪಕ್ಕಗಳ ಹರಡಿ ಮರೆಮಾಡಿ ಮಲಗಿಸುವವೇ ?
ಗರಿಗಳನು ಹರಡುತಲಿ ಮರೆಮಾಡಿ ಹಕ್ಕಿಗಳು
ಮರಿಗಳನು ಮಮತೆಯಲಿ ಮಲಗಿಸುವವೆಂತಮ್ಮ?
ನಿನ್ನ ಮೇಲುದವ ಗರಿಯೊಲು ಹರಡಿ ಅದರಿಂದೆ
ನನ್ನ ಮರೆಮಾಡಿ ಮಲಗಿಸಿ ಅದನು ತೋರೆನಗೆ.

## ಆರಕ್ಷ ಈರಕ್ಷ

ಎಲ್ಲಿ ಹೋದನೆ ಸೂರ್ಯನು ? ಅಮ್ಮ ! ಈ-
ಗೆಲ್ಲಿ ಹೋದನೆ ಸೂರ್ಯನು ?
ಮುಗಿಲಿನಂಗಳದಿ ಮೋಡದ ಮಕ್ಕಳೊಡಗೂಡಿ
ಹಗಲೆಲ್ಲ ಜಿಗಿದಾಟ-ದೂಳಾಟಗಳನಾಡಿ
ಬಲುಬಳಲಿ ಬೆಂಡಾಗಿ ತಾಯ ತೊಡೆಮಡಿಲಲ್ಲಿ
ಮಲಗಹೋಗಿಹನೇನು ಮುಂಜೆರಗ ಮುಸುಕಿನಲಿ ?
ಚಿಂತೆಯಿಲ್ಲದೆ ಮಲಗಿ ತಾಯ ತೊಡೆಯಲಿ ಅವನು
ಸಂತಸದಿ ನಿದ್ದೆಯನು ಮಾಡುತಿರಬಹುದೇನು ?
ಅವನೇನೊ ಈಗ ಸಂತಸದಿ ಮಲಗಿರಬಹುದು !
ಆದರೇನಮ್ಮ ! ಈ ಕರಿಯ ಕತ್ತಲೆ ಕವಿದು
ಕಣ್ಣಿಗೇನೂ ಕಾಣದೊಲು ಸುತ್ತುಮುತ್ತಿಹುದು
ನನ್ನ ಎದೆಯಲ್ಲಿ ಹೆದರಿಕೆಯು ತುಂಬುತ್ತಿಹುದು
ಬೆಳಕು ಬೀಳುವ ದೊಡ್ಡ ದೀವಿಗೆಯ ಹಚ್ಚಮ್ಮ !
ಕಳೆದು ಬಿಡೆ ! ಕರಿಯ ಮೋರೆಯ ಕತ್ತಲೆಯನಮ್ಮ !
ಹೊನ್ನಬಣ್ಣದ ದೀವಿಗೆಯ ಮುಂದೆ ಕುಳಿತೆನ್ನ
ನಿನ್ನ ತೊಡೆಯಲಿ ಕುಳ್ಳಿರಿಸಿಕೊಂಡು ನೀನೀಗ
“ಕಣ್ಗೆ ಕಾಮನರಕ್ಷ ಬೆನ್ಗೆ ಭೀಮನರಕ್ಷ”
ಎನ್ನುತಲಿ “ಆರಕ್ಷ ಈರಕ್ಷ” ಮಾಡಮ್ಮ!

# ಹಾಸಿಗೆ



ಅಮ್ಮ ! ನೀನೆಲ್ಲಿರುವೆಯೊ ? ಕರೆದರೂ
ಸುಮ್ಮನೇತಕೆ ಇರುವೆಯೊ ?
ನಿನ್ನ ಬಳಿಯಲ್ಲಿಯೇ ನಾನು ಮಲಗಿದ್ದೆ
ನನಗೆ ಎಲ್ಲಿಂದ ಬಂದಿತೊ ? ಕಾಳನಿದ್ದೆ
ನಿದ್ದೆಯಲಿ ಮೈಮರೆದು ಅತ್ತಿತ್ತ ಹೊರಳಿ
ಬಿದ್ದಿರುವೆನೆಲ್ಲಿಯೋ ಬಂದು ನೆಲದಲ್ಲಿ.
ಚುಚ್ಚಲೀ ನೆಲವು ಬಿರುಬಿರುಸಾಗಿ ಮೈಯನ್ನು
ಎಚ್ಚತ್ತು ಕಣ್ದೆರೆದು ಹುಡುಕುತಿಹೆ ನಿನ್ನನ್ನು.
ನಾನು ಮಲಗುವ ಮೊದಲು ಬೆಳಗುತಿಹ ದೀವಿಗೆಯು
ನೀನು ಕಳೆದೇಕೆ ಮಾಡಿಹೆಯಮ್ಮ ! ಕತ್ತಲೆಯ ?
ಕುರುಡನೊಲು ಕೈಯನಾಡಿಸುತಿಹೆನು ಕೆಳಗೆ.
ಬಿರುಸುನೆಲವೇ ತಾಗುತಿಹುದೆನ್ನ ಕೈಗೆ.
ಸಿಕ್ಕಲೊಲ್ಲದು ನಿನ್ನ ಹಾಸಿಗೆಯದೆಲ್ಲಿ ?
ಬಿಕ್ಕಿ ಅಳುತಿಹೆನಮ್ಮ ! ಇರುವೆ ನೀನೆಲ್ಲಿ ?
ಅಮ್ಮ ! ಗಡ ನೀನೇಳು ! ಹಚ್ಚುದೀಪವನು.
ನಿನ್ನ ಬಳಿಯಲಿ ಕರೆದುಕೊಳ್ಳೆ ನನ್ನನ್ನು.

---

# ಇರುಳು-ಕತ್ತಲೆ



ಇರುಳು ಇನ್ನೂ ಎಷ್ಟು ಇರುತಿಹುದೆ? ಅಮ್ಮ! ಈ
ಕರಿಯಕತ್ತಲೆಯೆಂದು ಹರಿದು ಹೋಗುವುದೆ?
ನಿದ್ದೆಯನು ಮಾಡಿ ಬೇಸತ್ತಿರುವೆ, ನಾನಿನ್ನು
ಬಿದ್ದಲ್ಲಿಯೇ ಬಿದ್ದುಕೊಂಡಿರಲು ಒಲ್ಲೆನು.
ಆದರೇನಮ್ಮ! ಸುಡುಗಾಡ ಕತ್ತಲೆಯು
ಆವರಿಸಿ ಬಿಟ್ಟಿಹುದು ಸುತ್ತುಮುತ್ತಲೆಯೂ.
ಮಿಣುಕುಮಿಣುಕಾಗಿ ಉರಿಯುವ ಕಿರಿಯ ದೀಪವಿದು
ಟೊಣಪನಂತಿಹ ಕತ್ತಲೆಯನೆಂತು ಕಳೆಯುವುದು ?
ಮುಸಕಾದ ಸಣ್ಣದೀಪದ ಬೆಳಕಿನೊಳಗೆ
ನಿನ್ನ ಮೋರೆಯುಗುರುತು ಸಹ ಸಿಕ್ಕದೆನಗೆ.
ಕತ್ತಲೆಯಬಣ್ಣದಾ ಕರಡಿ-ಮೋರೆಯ ಗುಮ್ಮ
ಕತ್ತಲೆಯ ನಿಟ್ಟಿನಿಂದಲಿ ಬರುವನಂತಮ್ಮ!
ನಿನ್ನೆಯೇ ಹೇಳಿದಳು ಅಕ್ಕನಿದನೆನಗೆ.
ನನ್ನೆದೆಯು ನಡುಗುತಿದೆ ಗುಮ್ಮ ನೆನಪಾಗೆ.
ಸುತ್ತಲೂ ಕವಿದ ಕತ್ತಲೆಯ ಮೋರೆಗೆ ತಿವಿದು
ಕಿತ್ತುಹಾಕುವ ಬೆಳಗು ಬರುವುದಾವಾಗಲದು?
ಬೆಳಗು ಬರುವನಕ ತೊಡೆಯುಲಿ ಕೊಳ್ಳ ನೀನು
ಕಳೆದು ಬಿಡು! ನನ್ನೆದೆಯೊಳಿರುವಂಜಿಕೆಯನು.

---

# ನೇಸರು

-⁂-

ಕೋಳಿಗಳು "ಕೂಕೂಕು" ಎಂದು ಕೂಗಿದಮೇಲೆ
"ಏಳಯ್ಯ ಹರಿ" ಎನುತೆ ನೀನು ಹಾಡಿದ ಮೇಲೆ
ಹಾರಿ ಹಕ್ಕಿಗಳು ಚಿಲಿಪಿಲಿಗುಟ್ಟಿದಾ ಮೇಲೆ
ಏರಿ ಗುಡ್ಡವನಿತ್ತ ಬರುವನೇ ನೇಸರನು ?
  ಅಂತಿರಲು ಬೇಗನೇ ಇತ್ತ ನೇಸರನು
  ಬರುವಂತೆ ಹಂಚಿಕೆಯ ನಾ ಮಾಡಲೇನು ?
ತಿಳಿಯಿತೌ ಹಂಚಿಕೆಯು ! ಕೋಳಿ ನಾನಾಗುವೆನು.
ಆದರಂತೆಯೇ "ಕುಕೂಕೂ" ಎಂದು ಕೂಗುವೆನು.
ನೀನು ದಿನದಿನವು ಬೆಳಗಿನೊಳು ಹೇಳುವ ಹಾಡ
ನಾನು ನೀನಾಗಿಯೇ "ಏಳಯ್ಯ ಹರಿ" ಎನುತೆ
  ಇನಿದಾದ ರಾಗದಲಿ ಈಗ ಹಾಡುವೆನು.
  ಜನರೆಲ್ಲರನು ನಿದ್ದೆಯಿಂದೆಬ್ಬಿಸುವೆನು
ಕೋಗಿಲೆಯು ಆಗಿ ನಾ ರಾಗವನು ಮಾಡುವೆನು.
ಕಾಗೆ–ಗುಬ್ಬಿಯು ಆಗಿ ಕೇರೆಂದು ಚೀರುವೆನು.
ಕೂಗಿ ಹಕ್ಕಿಯ ಹಿಂಡಿನಂತೆ ಕಲಕಲಿಸುವೆನು.
ಬೇಗನೇ ನೇಸರನು ಬರುವಂತೆ ಮಾಡುವೆನು.

---

# ಕಿಡಿಗೇಡಿ



ಕೆಂಪು ಕೆಂಪಾಗಿರುವುದೇಕೆ? ಸೂರ್ಯನ ಮೆಯ್ಯು
ಕೆಂಪು ಕೆಂಪಿರುವುದೇಕೆ?
ನಿನ್ನೆ ಕೆಮ್ಮಣ್ಣಾಟವಾಡಿ ಹೋಗಲು ಇವನ
ಮಣ್ಣು ಮುಸುಕಿರುವ ಮೆಯ್ಯನು ತಾಯಿ ನೋಡುತಲಿ
ತನ್ನ ಸೀರೆಯ ಸೆರಗಿನಿಂದೊರಿಸ ಬಾರದೇ?
ಮಣ್ಣು ಮುತ್ತಿಹುದು ಇನ್ನೂ ಇವನ ಮೈಗೆಲ್ಲ.
ಚೆನ್ನಾಗಿ ಇದನೆಲ್ಲವನು ತಿಳಿದೆನಮ್ಮ!
ನಿನ್ನಂತೆ ಇಲ್ಲನೋಡೇ ಈತನಮ್ಮ.
ಅಲ್ಲದೆಯೆ
ಬೆಳಗಿನೊಳು ಇವನ ತಾಯಿಯು ಎದ್ದು ಕುಂಕುಮದ
ತಿಳಕವನು ಹಣೆಗಿಟ್ಟುಕೊಳ್ಳುತಿರೆ ನೇಸರನು
ಗಳಿಲನೇ ಬಂದು ಕೈಯಲಿ ಹಿಡಿದ ಕರಡಿಗೆಯ
ಕೆಳಗೆ ಬೀಳಿಸಲು ಕುಂಕುಮ ಮೈಗೆ ಮುಸುಕಿಹುದೊ?
ಅಹುದರಿತೆ ಬಿಡು! ಅಮ್ಮ! ನಾನೊಬ್ಬನೇನೆ?
ನನಗಿಂತ ಹೆಚ್ಚು ಕಿಡಿಗೇಡಿಯಿವನಿಹನೆ.

# ಹೂ ಮಾಲೆ



ನೋಡಮ್ಮ! ಈ ಹೂಗಳೆನಿತಂದವಿರುತಿಹವು.
ಮಾಡಲೇನಿವನೀಗ? ಬಾಡಿಹೋಗುವವು.
ಏನ ಮಾಡುವುದನ್ನು ನಾತಿಳಿದೆನಮ್ಮ!
ನೀನಾಗು ಗುಡಿಯಲ್ಲಿ ಇರುವ "ಎಲ್ಲಮ್ಮ"
ಅಲುಗಾಡದೊಲು ಕುಳ್ಳಿರೆಲ್ಲಮ್ಮನಾಗಿ
ನಾಪೂಜೆಮಾಡುವೆನು ಪೂಜಾರಿಯಾಗಿ.
ಮುಗಿಲಲ್ಲಿ ಚಿಕ್ಕೆಗಳು ಮಿನುಮಿನುಗುವಂದದಲಿ
ಸೊಗಸಾಗಿರುವ ನಿನ್ನ ಕರಿಯ ಸೀರೆಯಮೇಲೆ
ಅಲ್ಲಲ್ಲಿ ಚೆಲ್ಲುವೆನು ಮಲ್ಲಿಗೆಯ ಹೂಗಳನು.
ಕಲ್ಯಾಣಮಾಡೆಂದು ಕೋರಿ ಕೈಮುಗಿಯುವೆನು.
ತಾವರೆಯನೇರಿಸುವೆ ನಾ ತಲೆಯಮೇಲೆ.
ಕೆಂಪುಬಣ್ಣದ ಹೂವನಿಡುವೆ ಕೈ ಮೇಲೆ.
ಈ ಗುಲಾಬಿಯ ಹೂವ ಕಿವಿಗೆ ಮುಡಿಸುವೆನು.
ಮಿಕ್ಕಹೂಗಳನು ಮೈಮೇಲೆ ತೂರುವೆನು.
ನನ್ನೆರಡು ಕೈಯ ತೊಡರಿಸಿ ನಿನ್ನ ಕೊರಳೊಳಗೆ
ಹೂಮಾಲೆಯಾಗಿ ನಾ ಜೋಲಾಡುವೆನು ಕೊನೆಗೆ.

---

# ಆಡಾಡ ಬುತ್ತಿ

-⊱⊰-

ಅಮ್ಮ ! ಊಟಕೆ ಒಲ್ಲೆನು ! ಕರೆಯುದಿರು !!
ಸುಮ್ಮನೇ ನಡೆಯೆ ನೀನು !
ಬಣ್ಣದಾಮಣೆಯನಿರಿಸಿದ್ದರೂ ಒಲ್ಲೆ !
ಹೊನ್ನ ತಳಿಗೆಯನು ಇಟ್ಟಿದ್ದರೂ ಒಲ್ಲೆ !
ಬಿಸಿಬಿಸಿಯ ಬೋನವನು ನೀಡಿದರು ಒಲ್ಲೆ !
ಹಸನಾದ ಹೆರತುಪ್ಪ ಹಾಕಿದರು ಒಲ್ಲೆ !
ಕೆನೆಮೊಸರ ಕಲಸನ್ನವಿಕ್ಕಿದರು ಒಲ್ಲೆ !
ಬೆಣ್ಣೆ ತೊಡೆದಿಹ ರೊಟ್ಟಿಯಿತ್ತರೂ ಒಲ್ಲೆ !
ಬರಿಯೆ ಹಾಲನ್ನವನೆ ಮುಂದಿಟ್ಟುಕೊಂಡು
ಎರಡುಕಣ್ಗಳ ಮುಚ್ಚಿ ನೀ ಕುಳಿತುಕೊಂಡು
"ಆಡಾಡಬುತ್ತೀ ಜೋಡುಮಾವಿನಕಾಯಿ
ಓಡಿಬಂದುಣ್ಣೊ ! ಕಂದಯ್ಯ" ಎನ್ನುತೆ ಹಾಡಿ
"ಹುಲಿ ಬಂತು ನರಿ ಬಂತು" ಎಂದು ಕರೆ ನೀನು.
ಬಲುಬೇಗ ಬಂದು ತೊಡೆಯಲ್ಲಿ ಕೂಡುವೆನು.
ಕಿರಿದುತ್ತಮಾಡಿ ಕೈಯಿಂದುಣಿಸೆ ನೀನು.
ಇಂತು ಮಾಡಿದರೆ ಊಟಕೆ ಬರುವೆ ನಾನು.

---

# ಅಕ್ಕನ ಕಾಟ

-※※-

ನೋಡು ನೋಡೇ! ಅಮ್ಮ! ಅಕ್ಕನನ
ಕಾಡುತಲಿ ಬರಿದೆ ಅಳಿಸುವಳೆನ್ನನು.
ಹುಡುಗರೆಲ್ಲರ ಕೂಡಿ ಥಾನಾಡುತಿರುವಲ್ಲಿ
ಹೊಡೆಯಲಾ ತುಂಟಕರಿಯನು, ಅಳುವ ಮೋರೆಯಲಿ
ನಿನಗದನು ಹೇಳಲಿಕೆ ಓಡಿ ನಾ ಬಂದೆ.
ಮನೆಯಲ್ಲಿ ನೀನು ಇಲ್ಲದುದನ್ನು ಕಂಡೆ.
ಅಕ್ಕನನು ಕೇಳಿದೆನು "ಅಮ್ಮನೆಲ್ಲಿಹಳೆಂದು"
ನಕ್ಕು ಹೇಳಿದಳಕ್ಕ "ತಮ್ಮವರ ಊರಿಗೆ
ಅಮ್ಮ ಹೋದಳು" ಎನಲು ಕೇಳಿ ನಡುಗಿದೆನು.
ಅಮ್ಮ ಅಮ್ಮಾ! ಎಂದು ಅಳಲು ತೊಡಗಿದೆನು.
ಮತ್ತಿಷ್ಟು ನಗುತವಳು "ಏನು ಮಾಡುವುದಯ್ಯ!
ಮತ್ತೆ ಅಮ್ಮನು ಮರಳಿ ಬರುವುದಿಲ್ಲವೊ ಏನೊ?"
ಎನಲು ಅಳತೊಡಗಿದೆನು ಚೀರಿ ಹೊರಳಾಡಿ.
ರಮಿಸದಲೆ ಅಕ್ಕ ನಗುತಿದ್ದಳೌ ನೋಡಿ.
ಅನಿತರಲ್ಲಿಯೆ ಹೊರಗಣಿಂದೆ ನೀ ಬಂದೆನಗೆ
ಇನಿದಾದ ಮುತ್ತಿಟ್ಟು ಮೈದಡವಿ ರಮಿಸಿದೆಯೆ
ನನ್ನನಳಿಸಿದುದಕ್ಕೆ ಅಕ್ಕನನು ಬೈದುದು
ಚೆನ್ನಾಯಿತಮ್ಮ! ಮಾಡಿದೆಯೊಳಿತನಿಂದು.

---

# ಅಲೆದಾಟ



ಬಿಸಿಲಲ್ಲಿ ಆಡಾಡಿ ಬಹಳ ನಾ ಬಳಲಿದೆನು.
ಉಸುರುಗಳೆಯುತೆ ಬಂದು ಮನೆಯಲ್ಲಿ ಮಲಗಿದೆನು.
ಮಲಗಿರಲು ಕೆಟ್ಟಕನಸೊಂದ ನೋಡಿದೆನು.
ಕಳೆದು ಕೊಂಡೆನು ಕನಸಿನಲ್ಲಿ ನಿನ್ನನ್ನು.
ಬೆದರಿ ಎಚ್ಚತ್ತು ಕೂಗಿದೆನು “ ಅಮ್ಮಾ ” ಎಂದು.
ಬರದಿರಲು ನೀನಾಗ ಮನದಲ್ಲಿ ಬಲು ನೊಂದು
ಎದ್ದು ಹುಡುಕಾಡಿದೆನು ಮನೆಯಲ್ಲಿ ಎಲ್ಲ.
ಎಲ್ಲಿಯೂ ನಿನ್ನನ್ನು ನಾ ಕಾಣಲಿಲ್ಲ.
ಉಕ್ಕಿ ಬರುತಿಹ ಅಳುವ ಒಳಗೆಯೇ ಹತ್ತಿಕ್ಕಿ
ಅತ್ತಿತ್ತ ನೆರೆಹೊರೆಯ ಮನೆಗಳಲಿ ನೋಡಿದೆನು.
ನೀ ಹೋಗಿ ಕುಳಿತುಕೊಳ್ಳುವ ಮನೆಗಳಲ್ಲಿ
ನಾ ಹುಡುಕಿದೆನು ಕಾಣಲಿಲ್ಲ ನೀನಲ್ಲಿ.
ಓಡುತಲಿ ದಾರಿಯೊಳು ಎಡವೆಡವಿ ಬೀಳುತಲಿ
ನೋಡದಲೆ ಕಲ್ಲಮುಳ್ಳನು ನಿನ್ನ ಹುಡುಕುತಲಿ
ಹೋಗಿ ನಾ ಹೊಳೆಯ ದಂಡೆಯಲಿ ನೋಡಿದೆನು
ಅಲ್ಲಿಯೂ ಕಾಣದೆಯೆ ಅಳಲು ತೊಡಗಿದೆನು.
“ ಕಂಡಿರುವಿರಾ ನಮ್ಮ ಅಮ್ಮನನು ? ” ಎಂದಳುತೆ
ಕಂಡವರನೆಲ್ಲ ಕೇಳುತೆ ಅಲೆದು ಊರೆಲ್ಲ
ಬಳಲಿ ಬೆಂಡಾಗಿ ನಾ ಮನೆಗೆ ಮರಳಿದೆನು.
ಇದು ಏನೆ ? ಮನೆಯಲ್ಲಿಯೇ ಇರುವೆ ನೀನು.



# ಹೆಮ್ಮೆ-ಮುಳಿಸು



ಹೆಮ್ಮೆ ನನಗಿಲ್ಲವೇನೇ ? ಅಮ್ಮಯ್ಯ !
ಮುಳಿಸು ನಿನಗಿಲ್ಲವೇನೆ ?
ಏನಾದರೂ ನಿನ್ನ ಮಾತನ್ನು ಕೇಳದೆಯೆ
ನಾನು ಮರುಮಾತಾಡೆ ಗದ್ದರಿಸಿ ಬೈಯುವೆಯೆ
ಸಿಡುಕಿನಲಿ ನಿನ್ನ ಬಳಿಯಿಂದೆ ಹೊರಹೊರಡುವೆನು.
“ ಬರುವೆಯೋ ಮತ್ತಿನ್ನ ಬಳಿಗೆ ! ” ಎನ್ನುವೆ ನೀನು.
“ ಇಲ್ಲ ನಡೆನಡೆ ಬರುವುದಿಲ್ಲ ! ” ಎನ್ನುವೆನು.
ಒಳ್ಳೆಹೆಮ್ಮೆಯ ಮಾತ ಹೇಳಿ ಹೋಗುವೆನು.
ಹೋಗಿ ನಾನಲ್ಲಿಂದೆ ಅಕ್ಕನೊಡನಾಡುವೆನು.
ಆಗವಳು ಕಾಡುತ್ತೆ ಅಳಿಸುವಳು ನನ್ನನ್ನು.
ಅಳುತಳುತೆ ಮರಳಿ “ ಅಮ್ಮಾ ” ಎಂದು ನಾನಿನ್ನ
ಬಳಿಯಲಿಯೆ ಬಂದು ದೂರನ್ನು ಹೇಳುವೆನಮ್ಮ.
ಗದ್ದರಿಸಿ ಅಕ್ಕನನು, ನನ್ನ ಮೈದಡವಿ
ಮುದ್ದಿಡುತೆ ಮತ್ತೆ ಕರೆಕೊಂಡು ರಂಬಿಸುವೆ
ನನ್ನ ಹೆಮ್ಮೆಯು ಆಗ ಹೋಗುವುದದೆಲ್ಲಿ ?
ನಿನ್ನ ಆ ಮುಳಿಸು ಮರೆಯಾಗುವುದದೆಲ್ಲಿ ?

---

# ಬಡವೆ



ದಿನದಿನವು ಉಡುವ ರೇಸಿಮೆಯ ಸೀರೆಯದೆಲ್ಲಿ ?
ಮಿನುಗುತಿರುವಾ ಜರಿಯ ಹಸುರು-ಕುಪ್ಪಸವೆಲ್ಲಿ ?
ಮೂಗಿನಲಿ ಮೆರೆವ ಮುತ್ತುಗಳ ಮೂಗುತಿಯೆಲ್ಲಿ ?
ತೂಗಾಡುತಿಹ ಕಿವಿಯ ರನ್ನದೋಲೆಗಳೆಲ್ಲಿ ?
ಕೊರಳ ಸರಗಳು ಎಲ್ಲಿ ? ಹರಳ ಪದಕವದೆಲ್ಲಿ ?
ಕರದ ಕಂಕಣವೆಲ್ಲಿ ? ಶಿರದ ಹೊಂದೊಡವೆಲ್ಲಿ ?
ದೂಳಿ ಮುಸುಕಿರುವ ಮಾಸಿದ ಸೀರೆಯುಟ್ಟಿರುವೆ.
ಹರಕುಹರಕಾದ ಹಳೆಕುಪ್ಪಸವ ತೊಟ್ಟಿರುವೆ
ಬರಿದು ಬರಿದಾಗಿ ತೋರುವವು ಕಿವಿಮೂಗುಗಳು.
ಕರಿಮಣಿಯ ಸರವೊಂದೆ ಕಾಣುತಿದೆ ಕೊರಳಿನೊಳು.
ತಲೆಯ ಕೂದಲು ಎಲ್ಲ ಹಿಂಜಿ ಹಾರಾಡುವವು.
ಕರಿಯ ಕಾಜಿನ ಬಳೆಗಳೇ ಕರದೊಳಿರುತಿಹವು.
ಇದು ಏನೆ ? ಸೊಗಸಾದ ಉಡಿಗೆ–ತುಡಿಗೆಯನುಳಿದು
ಕುಳಿತಿರುವೆಯೇಕೆ ಬಡವೆಯ ವೇಷವನು ತಳೆದು ?
ಅಂದದುಡಿಗೆಯನುಡಲು ಚೆಂದದೊಡವೆಯನಿಡಲು
ಅಂದು ನನ್ನಯ ಕಣ್ಗೆ ಅಂದತೋರುತಲಿದ್ದೆ.
ಇಂದೆಲ್ಲವನು ಬಿಟ್ಟು ಚಿಂದಿಯುಟ್ಟುದರಿಂದೆ
ಚೆಂದಕಾಣುವುದಿಲ್ಲವಮ್ಮ ! ನೀ ಕಂಗಳಿಗೆ.
ಇಂತಾದರೆಯು ಬಿಡದೆ ನೋಡುತಲಿ ನಿನ್ನನ್ನು
ಬಳಿಯಲಿಯೆ ಕುಳಿತುಕೊಳಬೇಕೆಂದೆ ಬಯಸುವೆನು.



# ತಿರುಕರ ಮುದುಕೆ

ತಿರಿದುಕೊಳ್ಳುವ ಮುದುಕೆಯಾಗಮ್ಮ! ನೀನು,
ತಿರುಪ ನೀಡುವೆ ನಿನಗೆ ಬೇಕಾದುದನ್ನು.
ಏನೆ ಮುದುಕಮ್ಮ ನಿನಗೇನೇನು ಬೇಕಮ್ಮ?
ನಾ ನೀಡುವೆನು ಬರಿಗೆ ಕೂಗಿಕೊಳಬೇಡಮ್ಮ!
ನಿನಗೆ ತಿನಲುಣಲು ಸವಿಸವಿಯ ತಿನಿಸುಗಳಿಲ್ಲೆ?
ನನಗಮ್ಮ ಕೊಡುವ ತಿನಿಸೆಲ್ಲ ಕೊಡುವೆನು ನಿಲ್ಲೆ!
ಬಟ್ಟೆಗಳು ಇಲ್ಲದೆಯೆ ಚಳಿಯಿಂದೆ ನಡುಗುವೆಯೆ?
ಕೊಟ್ಟು ಬಿಡುವೆನು ನನ್ನ ಬಟ್ಟೆಯೆಲ್ಲವ ಹಿಡಿಯೆ.
ನಿನ್ನ ಮಕ್ಕಳಿಗೆ ಬೇಕೇನು ಹೊಂದೊಡವುಗಳು?
ನನ್ನ ಒಡವೆಯನೆಲ್ಲ ಬಿಚ್ಚಿ ಕೊಡುವೆನು ನಿಲ್ಲು!
ಅಲ್ಲದೆಯೆ ಬರಿಹೊಟ್ಟೆ ಬರಿಮೆಯ್ಯಲೇ ನಾನು
ನಿನ್ನೊಡನೆ ಬಂದು ತಿರುಕೊಳಲು ನೆರವಾಗುವೆನು.
ನನಗೊಂದು ಕಿರಿಯ ಜೋಳಿಗೆಯನ್ನು ಕೊಡು ನೀನು.
ಮನೆಮನೆಗೆ ಹೋಗಿನಾ ತರುವೆನೌ! ತಿರುಪವನು.
ಊರ ಮುಂದಣ ಹೊಳೆಯ ದಂಡೆಯಾ ಮಳಲಿನಲಿ
ಸೇರಿ ನಾವಿಬ್ಬರೂ ತಿರಿದ ಕೂಳುಣ್ಣುತಲಿ
ಹೊಳೆಯ ತಿಳಿನೀರನ್ನು ಮನದಣಿಯೆ ಕುಡಿಯುತಲಿ
ಕಳೆದುಕೊಳುವಾ! ಬಳಲ, ಮಲಗಿ ಗಿಡದಡಿಯಲ್ಲಿ;
ನನ್ನ ಮೆಯ್‌ಮರೆಮಾಡಿ ಹರಿದ ಮುಂಜೆರಗಿನೊಳೆ
ನಿನ್ನ ಬಳಿಯಲಿ ನಲುಮೆಯಿಂದೆ ಮಲಗಿಸಿಕೊಳ್ಳೆ!

---

# ಕುರುಡತಿರುಕ

ಕುರುಡತಿರುಕನು ಆಗಿ ಬರುವೆನಮ್ಮಾ ನಾನು.
ತಿರುಪನೀಡೆನಗೆ ನಾ ಬೇಡುವುದನು
ಕೋಲ ಕೈಯಾಡಿಸುತೆ ಕಾಲ್ಕತಡವರಿಸುತ್ತೆ
ಬೀಳುವೆನೊ ! ಎಂಬಂತೆ ಬಗೆಯನ್ನು ತೋರಿಸುತೆ
ಎರಡು ಕಣ್ಣುಗಳನ್ನು ಕಾಣದೊಲು ಮುಗಿದು
ಕುರುಡ ನಾನಾಗಿ ಬರುವೆನು ತಿರಿಯಲೆಂದು.
" ತಗ್ಗು–ತೆವರುಗಳಲ್ಲಿ ಕಲ್ಲು–ಕಾಲುವೆಯಿಲ್ಲಿ
" ಮುಗ್ಗರಿಸಿ ಬೀಳದಿರು ! ನಡುದಾರಿಯಿಂದೆ ಬರು ! "
ಇಂತು ನೀನೆಚ್ಚರಿಸೆ ಸಿಂತು ದೂರದಲಿ,
ಚಿಂತೆಯಿಲ್ಲದೆ ಬರುವೆ ನಿನ್ನ ಬಳಿಯಲ್ಲಿ.
" ಶಿವಶಿವಾ ಮಾದೇವ ಶಿವ ! " ಎಂದು ಹಾಡುತಲಿ
" ಕಣ್ಣಿಲ್ಲದಿಹ ಕುರುಡ ನಾ " ನೆಂದು ಹೇಳುತಲಿ
" ತಿರುಪ ನೀಡಿರಿ " ಎಂದು ಬೇಡಿಕೊಳ್ಳುತಲಿ,
ತಿರುಗುತ್ತ ಬರುವೆನಾ ! ನಿನ್ನ ಬಳಿಯಲ್ಲಿ.
ನೀನು ತಿರುಪವನೆನಗೆ ಏನ ಕೊಟ್ಟರು ಕೊಳ್ಳೆ ;
ಹೊನ್ನು–ಹಣ–ಅನ್ನ–ಅರಿವೆಯನೊಂದನೂ ಒಲ್ಲೆ ;
" ಕುಳ್ಳಿರಿಸಿಕೊಂಡು ತೊಡೆಯಲಿ ಎನ್ನನೀನು
" ಒಳ್ಳೆ ಸವಿಮುದ್ದನಿಡು " ಎಂದು ಕಾಡುವೆನು.

---

# ನಾನೊಲ್ಲೆ



ಕುರುಡನಾಗಲಿಕೆ ನಾನೊಲ್ಲೆನಮ್ಮಯ್ಯ ! ನಾ
ಕುರುಡನಾಗಲಿಕೊಲ್ಲೆನು.
ಎರಡುಕಣ್ಣುಗಳನೂ ಮುಚ್ಚಿದೊಡನೆಯೆ, ಬೆಳಕು
ಮರೆಯಾಗಿ ಕತ್ತಲೆಯು ಮುಚ್ಚಿ ಮುಸುಕುವುದಮ್ಮ !
ಕತ್ತಲಲಿ ಕರಿಯಮೋರೆಯು ಗುಮ್ಮಬಂದು
ಒತ್ತಿ ಹೆದರಿಸುವುದದು ಬಾಯ್ ತೆರೆದುನಿಂದು.
ಎಲ್ಲಿಯಾದರು ಕಾಲುತೊಡಕಿ ಬಿದ್ದರೆ, ನನ್ನ
ಹಲ್ಲುದುರಿ ಹೋಗಿ ನಾ ಮುದುಕನಾಗಲು ಬಹುದು ;
ಮುದುಕನಾದರು ನನ್ನ ಮುದ್ದಿಸುವೆಯೇನೆ ?
ಮೊದಲಿನೊಲು ತೊಡೆಯಲ್ಲಿ ಮಲಗಿಸುವೆಯೇನೆ ?
ತಿರುಕೊಳಲು ಬರುವ ಕುರುಡರನು ನೀನೆಂದೆಂದು
ಕರೆದು ಮೆಚ್ಚಿನಲಿ ಮಾತಾಡಿಸುವುದಿಲ್ಲಮ್ಮ !
ಅವರಂತೆಯೇ ಕುರುಡ ನಾನಾಗಿ ಬರಲು,
ನುಡಿಸಲಿಕ್ಕಿಲ್ಲ ನೀ ಕರೆದು ನಲುಮೆಯೊಳು.
ನಿನ್ನ ಮೋರೆಯು ಒಂದು ಕಾಣುತಿರೆ ಎದುರಿನೊಳು
ಇನ್ನಾವ ಆಟ-ನೋಟಗಳನೂ ನಾನೊಲ್ಲೆ
ಕಣ್ಣನೆರಡೂ ಮುಚ್ಚಿ ಕುರುಡನಾನಾಗೆ
ನಿನ್ನ ಮೋರೆಯದೆಂತು ಕಾಣುವುದೆ ನನಗೆ ?
ಅದರಿಂದೆ ಮತ್ತೆ ಮಿಕ್ಕಾಟಗಳನಾಡುವೆನು
ಕುರುಡನಾಗಲು ಮಾತ್ರ ಒಲ್ಲೆನಮ್ಮಾ ! ಇನ್ನು.

---

# ನಿದ್ದೆ-ಮುದ್ದು

-⊱⊰-

ಅಂದು ಬೆಳಗಿನೊಳು ಅರೆನಿದ್ದೆಯೊಳು ಮಲಗಿರಲು
ಬಂದು ಬಳಿಯಲಿ ಕುಳಿತು ನಿನ್ನ ಮೆಲುಮಾತಿನೊಳು
ನನ್ನನ್ನು ಕೂಗಿ ಕರೆದೆಬ್ಬಿಸಿದೆಯೌ ನೀನು.
ಕಣ್ಣನರೆ ತೆರೆಯುತಲಿ ಅರೆನಿದ್ದೆಯೊಳೆ ನಾನು
ನಿನ್ನ ಮಸಮಸಕು ಮೋರೆಯನು ನೋಡಿದೆನು.
ಕಣ್ಣುಗಳ ಹಾಗೆಯೇ ಮರಳಿ ಮುಚ್ಚಿದೆನು.
ನನ್ನ ಮೈಮೇಲೆ ನೀನಾಗ ಕೈಯಾಡಿಸಿದೆ.
ನಿನ್ನ ಇಸಿದುಟಿಯಿಂದೆ ನನ್ನ ಮೊಗ ಮುದ್ದಿಸಿದೆ.
ಕನಸಿನೊಳು ನಾನು ಇದನೆಲ್ಲವನು ಕಂಡಂತೆ
ಎನಿಸಿ, ಆನಂದದಿಂದೆದೆಯರಳಿ ಎಚ್ಚತ್ತೆ.
ಚೆನ್ನಾಗಿ ಎಚ್ಚತ್ತು ಕಣ್ಣುಗಳ ತೆರೆದೆ;
ನನ್ನ ಬಳಿಯಿಂದೆ ನೀ ಹೋದುದನು ತಿಳಿದೆ.
ಅಂದಿನಾ ಮುದ್ದಿನೊಳಗಿದ್ದ ಸವಿಯನು ನಾನು
ಎಂದೆಂದು ಮರಳಿ ಕಂಡಿಲ್ಲವದಕೆಯೆ ನೀನು
ಅಂದಿನಂತಹ ನಿನ್ನ ನಗೆಯರಳ ಮೋರೆಯಲಿ
ಇಂದೊಂದು ಅಂದಿನಂದದ ಮುದ್ದನೀಯಮ್ಮ!

---

# ಹೂದೋಟ

ಹೊರಗೆ ಎಲ್ಲಿಯೊ ದೂರ ಆಡಲಿಕೆ ಎಂದಕ್ಕ
ಕರೆದುಕೊಂಡೊಯ್ದಿರಲು ನಾನಾಗ ನಸುವೇಳೆ
ಕಣ್ಣಮುಚ್ಚಾಟ ಕಳಿಮಳಿಯಾಟವಾಡಿದೆನು.
ಮಣ್ಣ ಬಡಿಬಡಿದು ಗುಬ್ಬಿಯ ಮನೆಯ ಮಾಡಿದೆನು.
ಆಡುವುದು ಸಾಕಾಗಿ ನಿನ್ನ ನೆನಪಾಯ್ತು.
ನಿನ್ನೆಡೆಗೆ ಬರಲೆಂದು ನನ್ನ ಮನವಾಯ್ತು.
"ಕರೆಕೊಂಡು ನಡೆಯೆನ್ನ ಅಮ್ಮನ ಬಳಿಗೆ" ಎಂದು
ಕರೆಕರೆಯ ಮಾಡುತಲಿ ಅಕ್ಕನನು ಕಾಡಿದೆನು.
ಅವಳಾಗ ಮನೆಗೆ ನಡೆಯದೆ ನನ್ನ ಕರೆಕೊಂಡು
ಜವದಿಂದಲೊಂದು ಹೂದೋಟದೊಳು ನಡೆತಂದು
"ಮಲ್ಲಿಗೆಯ ಗೊನೆ ನೋಡು! ಮಾಮರದ ಮಿಡಿ ನೋಡು!
"ಸಂಪಿಗೆಯ ನನೆ ನೋಡು! ಕೆಂಪು ಕಮಲವ ನೋಡು!"
ಎನುತ ತೋರಿಸಿದಳೌ! ಬನದ ಚೆಲುವನ್ನು;
ನನಗೆ ಮರೆಯಿಸಲೆಂದು ನಿನ್ನ ನೆನಪನ್ನು.
"ಇದನೆಲ್ಲ ನಾನೊಲ್ಲೆ, ಅಮ್ಮನೆಲ್ಲಿಹಳದನು
"ಮೊದಲು ತೋರಿಸು ನನಗೆ" ಎಂದು ನಾ ಕೇಳಿದೆನು.
"ಅಮ್ಮನನು ಕೊಂಡು ನೀನೇನು ಮಾಡುವೆ ತಮ್ಮ?
"ಸುಮ್ಮನಿರು! ನೋಡು! ತೋಟವಿದೆಷ್ಟು ಚೆಲುವಿಹುದು!"
ಎನುತೆ ಬಣ್ಣಿಸಿದಳೌ! ಮತ್ತೆ ತೋಟವನು.
"ನನಗೇನು ಬೇಡ ತೋಟವು" ಎಂದೆ ನಾನು.
"ಬೇಡತೋಟವನು ಸುಡು! ಬೇಕು ಅಮ್ಮನು" ಎನುತೆ
ವೋಡಿಯಲಿ ಹೊರಳಿ "ಅವ್ಮಾ!" ಎಂದು ಚೀರಿಡುತೆ
ಅಳುತಿರಲು ನಾನು ಬಂದೆತ್ತಿಕೊಂಡೆಯೆ ನೀನು.
ನಲುವೆಯಿಂದುಬ್ಬಿ ತಬ್ಬಿದೆ ನಿನ್ನ ಕೊರಳನ್ನು.
ನಾನಳುವ ದನಿಯು ನಿನಗೆಂತು ಕೇಳಿಸಿತೆ?
ನೀನಿಲ್ಲಿ ಬರಲು ದಾರಿಯನೆಂತು ಅರಿತೆ?
ಅಂದವೇನೇನು ತೋರದೆ ತೋಟವಿದು ಮೊದಲು
ಚೆಂದವಿನಿತೇಕೆ ಕಾಣುವುದಮ್ಮ! ನೀ ಬರಲು?

# ನಾನೆಲ್ಲ ಬಲ್ಲೆ !



ಬಲ್ಲೆ ನಿನ್ನಯ ಬಗೆಯನು ಅಮ್ಮ ! ನಾ-
ನೆಲ್ಲವನು ತಿಳಿದಿರುವೆನು.
“ ತೊಡೆಯ ಬಿಟ್ಟಿಳಿಯನಿವನಾವಾಗಲೂ ” ಎಂದು
ಒಡವೆಗಳನೇನೇನೊ ಕೊಟ್ಟು ರಂಬಿಸಿಯಿಂದು
ಹೊರಗೆ ಆಡಲು ಕಳಿಸಬೇಕೆನುವೆಯೆನ್ನ.
ಅರಿಯೆನೇ ? ನಿನ್ನ ಮನಸಿನ ಮಾತುಗಳ ನಾ.
ಬೇಡಿನಾನಳುತಿರಲು ನೋಡಲೂ ಸಹ ಕೊಡದ
ಜೋಡುಗೊಂಬೆಗಳನ್ನು ಬೇಡದೆಯೆ ಕೊಡುತಿರುವೆ !
ಬಲ್ಲೆನಾ ! ನಿನ್ನ ಮರೆಮಾತನೆಲ್ಲವನು
ಒಲ್ಲೆ ! ಕೊಂಡಿವನೀಗ ನಾ ಮಾಡಲೇನು ?
ಬಂಡಿ ಬಸವನು ಬೇಡ ! ಚೆಂಡು-ಚಿಣಿಗಳು ಬೇಡ !
ಗೊಂಡೆಕಟ್ಟಿದ ಗಿಳಿಯು ಆನೆ-ಕುದುರೆಯು ಬೇಡ !
ಗುಂಡು ಗುಳ್ಳೆಯು ಗಜಗ ಬೊಗರೆಗಳು ಬೇಡ !
ಬೆಂಡಬಾಜೆಯು ಗುಬ್ಬಿ ಕೊಳಲುಗಳು ಬೇಡ !
ಹಸುರುಹೂವಿನ ಮುಡಿಗೆ ಮೆಯ್ಯುಮರೆಗಳನೊಲ್ಲೆ !
ಹೊಸರೇಸಿಮೆಯ ವಲ್ಲಿ ಜರಿಯುಪಾವುಡ ಒಲ್ಲೆ !
ಕುಸುರಿಸೆವ ಚಿನ್ನರನ್ನದ ತೊಡವನೊಲ್ಲೆ !
ರಸಬೆರೆತ ತನಿವಣ್ಣು ತಿನಿಸುಗಳನೊಲ್ಲೆ !
ಏನನಿತ್ತರು ಒಲ್ಲೆ ! ಏನನಿತ್ತರು ಒಲ್ಲೆ !
ನಾನಿನ್ನ ತೊಡೆಮಡಿಲ ಬಿಟ್ಟಿಳಿಯಲೊಲ್ಲೆ !



# ಮುಗಿಲ ಹೂ

ಮುಗಿಲಲ್ಲಿ ಮಿನುಮಿನುಗಿ ನಗುತಿರುವ ತಾರೆಗಳು
ಹಗಲು ಹೋದೊಡನೆ ಎಲ್ಲಿಂದೆ ಬರುವುವು ಹೇಳು!
ಪಾರಿಜಾತದ ಅರಳು ನಿತ್ಯ ನಮ್ಮಂಗಳದಿ
ಸೂರೆಯಾಗುವವಲಾ ಬೆಳಗಿನೊಳು? ಆ ತೆರದಿ
ತಾರೆಗಳು ಸಂಜೆಯಾದೊಡನೆಯೇ ದಿನದಿನದಿ
ಸೂರೆಯಾಗುವವಲ್ಲ! ಈ ಮುಗಿಲಿನಂಗಳದಿ;
ಸೂರೆಮಾಡುವರಾರು ಇಲ್ಲಿ ಇವುಗಳನು?
ತೋರಲೊಲ್ಲದು ನನಗೆ ಹೇಳಿದನು ನೀನು.
"ಸುರರ ಮನೆಮೇಲಿಹುದು" ಎಂದು ನೀ ಹೇಳಿರುವೆ!
ಸುರರ ಮನೆಯಂಗಳದ ಪಾರಿಜಾತದ ಗಿಡವೆ
ಅರಳಿದರಳುಗಳನ್ನು ಕೆಳಗೆ ಸುರಿಸುವುದೇನು?
ಅರಿತೆ! ಅಹುದಹುದು ಬಿಡು! "ಅರಳೆ ಇವು" ಎಂಬುದನು.
ಮಿರುಗು ಎನಿತಿಹುದಮ್ಮ ಈ ಹೂವುಗಳಿಗೆ!
ಅರಳಿಸುವುದೆದೆಯನ್ನು ಎಷ್ಟಿದರ ಬೆಡಗೆ?
ನೋಡು! ನಮ್ಮಂಗಳದ ಪಾರಿಜಾತದ ಗಿಡವು
ಪಾಡಲ್ಲವಮ್ಮ! ಸುಡುಗಾಡು ಹೂ ಬಿಡುತಿಹವು.
ನೋಡನೋಡುವುದರಲ್ಲಿಯೆ ಬಾಡಿ ಹೋಗುವವು.
ಬಾಡದಲೆ ಇಹವು ನೋಡೇ! ಮುಗಿಲಹೂಗಳಿವು!
ಅಮ್ಮ! ಬೇಗನೆ ಎನ್ನ ದೊಡ್ಡವನ ಮಾಡೆ!
ಒಮ್ಮೆಲೇ ನಾಮುಗಿಲ ಮುಟ್ಟುವೊಲುಮಾಡೆ!
ಬೇಗ ಬಳೆಯಿಸಿ ದೊಡ್ಡವನ ಮಾಡೆ! ನೀನಿಂದು.
ಹೋಗಿ ನಾ ಮೇಲಿರುವ ಅರಳನಾರಿಸಿ ತಂದು
ಚೆನ್ನಾಗಿ ಸಮೆದು ಮಾಲೆಯನು ಮಾಡುವೆನು.
ನಿನ್ನ ಕೊರಳೊಳು ಹಾಕಿ ಸೊಬಗ ನೋಡುವೆನು.

# ಕೂಗು-ಹುಡುಕು



ಬಂದೆನೌ! ಮನೆಗೆ "ಅಮ್ಮಾ!" ಎಂದು ಕೂಗುತಲಿ.
"ಕಂದ! ನಾನಿಲ್ಲಿ ಕುಳಿತಿಹೆನು ಬಾ" ಎನ್ನುತಲಿ
ನೀನು ಮೆಲುಮಾತಿನೊಳು ನುಡಿದ ದನಿಗೇಳಿ
ನಾನು ಬಂದೆನು ಒಳಗೆ ಓಡುತೋಡುತಲಿ.
  ಓಡುತೋಡುತಲಿ ಆತುರದಿ ಬಂದೆನು. ಇಲ್ಲಿ
  ನೋಡಿದೆನು ನೀ ಕಾಣಲೊಲ್ಲೆ! ಇರುತಿಹೆಯೆಲ್ಲಿ?
ಕುರುಳ ಸರಿಮಾಡಿಕೊಳ್ಳುವ ಹಣಿಗೆಯಿಲ್ಲಿಹುದು.
ಮಿರುಗುಮೊಗ ನೋಡಿಕೊಳ್ಳುವ ಕನ್ನಡಿಯು ಇಹುದು.
ತುರುಬಿನಲಿ ಮುಡಿದ ಅರಳುಗಳು ಸುರಿದಿಹವು.
ಕೊರಳಸರ ಬೆರಳುಂಗುರಗಳು ಬಿದ್ದಿಹವು.
  ಅರಿಸಿಣದ ಕುಂಕುಮದ ಕರಡಿಗೆಗಳಿಹವಿಲ್ಲಿ.
  ಅರಿಯೆನೇ?! ಎಲ್ಲವೂ ನಿನ್ನವಿವು! ನೀನೆಲ್ಲಿ?!
ಅಡಿಗರುಹು ಮೂಡಿಹುದು ಇಲ್ಲಿ ಎಡೆಯಾಡಿದೊಲು.
ಹುಡುಗಾಟ ಮಾಡಬೇಕೆಂದು ನೀ ನಾ ಬರಲು
ಅಡಗಿರುವೆಯೆಲ್ಲಿಯೋ! ಎಂದು ಕಾಣುವುದು.
ಹುಡುಕದೆಯೆ ಬಿಡುವೆನೇ?! ನಿನ್ನನಾನಿಂದು!
  ಎಲ್ಲಿ ಅಡಗಿದ್ದರೂ ಹುಡುಕಿ ನಾ ಹಿಡಿಯುವೆನು.
  ಬಲ್ಲೆನೌ! ಚೆನ್ನಾಗಿ ಕಣ್ಣಮುಚ್ಚಾಟವನು.
  ಇನ್ನೊಮ್ಮೆ ಮುನ್ನಿನೊಲು ನನ್ನ ಕರೆ ನೀನು.
  ನಿನ್ನ ದನಿ ಬರುವ ದೆಸೆಯಲ್ಲಿ ಹುಡುಕುವೆನು.

# ಬೆಳದಿಂಗಳು

ತಿಂಗಳನ ತಂಬೆಳಗಿನಲ್ಲಿ ನಲಿಯುತೆ ನಾನು
ಅಂಗಳದಿ ಕುಣಿದಾಡಿ ತಣಿಯಬೇಕೆನ್ನುವೆನು.
ಅಮ್ಮ! ಇದು ಏನೆ? ಕಿಡಿಗೇಡಿ ತಿಂಗಳನಿವನು
ಸುಮ್ಮನಿರದೆಯೆ ಹೇಗೆ ಹೇಗೆಯೋ ಮಾಡುವನು.
ಒಮ್ಮೆ ಅರಳಿದ ತನ್ನ ಮೋರೆದೋರುವನು.
ಒಮ್ಮೆ ಮೋಡದ ಮುಸುಕಿನಲ್ಲಿ ಸೇರುವನು.
ಏನಾದರೂ ತುಂಟತನವ ಮಾಡಲು ನಾನು.
ನೀನು ಸೆರಗಿನಲಿ ಮರೆಮಾಡುತಲಿ ಮೋರೆಯನು,
ಗುಮ್ಮನಂತಾಗಿ ಹೆದರಿಸುವೆಯಲೆ ನನ್ನನ್ನು?
ಅಮ್ಮ! ನಿನ್ನಂತೆಯೇ ಚಂದಪ್ಪನಿವ ತಾನು
ಮರೆಮಾಡಿ ಮೋಡದಲಿ ತನ್ನ ಮೋರೆಯನು
ಕರಿಗುಮ್ಮನಾಗಿ ಹೆದರಿಸುತಿರುವನೇನು?
ನಾನಂಜಿ ಅಳುತಿರುವೆನೇನೆಂದು ನೋಡಲಿಕೆ
ತಾನೆ ಮುಸುಕನು ಮೆಲ್ಲಮೆಲ್ಲನೋಸರಿಸುತ್ತೆ
ಮರಳಿ ನಗುನಗುತೆನ್ನ ಮೋರೆಯನು ನೋಡುವನು.
ಅರಿಯುವನು ನಾ ನಸುವು ಅಂಜಿಲ್ಲವೆಂಬುದನು.
ಮುನ್ನಿನಂತೆಯೆ ಮುಗಿಲ ಮುಸುಕಹಾಕುವನು,
ನನ್ನನಂಜಿಸೆ ಮತ್ತೆ ಗುಮ್ಮನಾಗುವನು.
ಅಮ್ಮ! ನೀನೆನ್ನ ಬಳಿಯಲ್ಲಿರಲು, ನಾನು
ಗುಮ್ಮನಪ್ಪನು ಬಂದರೂ ಬೆದರದಿಹೆನು.

# ದೇವರಗುಡಿ



" ಗುಡಿಯಲ್ಲಿ ದೇವನಿಹ ಪೊಡಮಡುತೆ ಬೇಡಿಕೊಳೆ
" ಕೊಡುವನವ ಬೇಡಿದುದನೆಂದು" ನೀ ಹೇಳುತಲೆ
ಹಿಡಿಸಲಾರದ ಹಿಗ್ಗಿನಿಂದೆ ನಾನೋಡೋಡಿ,
ಗುಡಿಗೆ ಹೋಗುತಲಿ ಪೊಡಮಡುತೆ ಬಿನ್ನಹವಮಾಡಿ,
ಎನಿತೆನಿತೊ ಬಗೆಯ ಬಯಕೆಯ ಬೇಡಿಕೊಂಡೆ;
ಕೊನೆಗೆ ಬೇಸತ್ತು ನಿನ್ನಯ ಬಳಿಗೆ ಬಂದೆ.
" ದೂರ ಹೋಗಿದ್ದರೆಯು ಅಮ್ಮನೆಲ್ಲಿಯೊ ಹೊರಗೆ,
" ತೋರುತಿರುವೊಲು ನಿಚ್ಚ ಅವಳ ನಗೆಮೊಗವೆನಗೆ
" ಮಾಡಬೇಕೆಂದು" ಮೋಡಿಯ ಹಿಡಿದು ಕೈಮುಗಿದು.
ಬೇಡಿಕೊಂಡೆನು; ಹೋಯಿತೆಲ್ಲ ಹುಸಿಯಾಗಿ ಅದು.
ಎನಿತು ಹುಸಿನುಡಿಯ ಹೇಳಿದೆಯೆ ನೀನಿಂದು?
ಎನಿಸಿತಾ! " ನನಗೆ ಹೇಳಿದುದು ನಿಜ" ವೆಂದು.
" ಕರೆದೊಡನೆಯೇ ನಾನು ಇರುವೆಡೆಯೊಳೇ ಅಮ್ಮ
" ಹೊರಟು ಬರುವಂತೆ ಬಲುಸರವ ನೀಡೆನಗೆಂದೆ.
" ಕರೆಯುವಳಲಾ ಅಮ್ಮ ನನ್ನನಿನಿನುಡಿಯಿಂದೆ?
" ನಿರುತವಾನುಡಿ ಕೇಳುತಿರಬೇಕು ಕಿವಿಗೆಂದೆ.
" ಮುದ್ದಾಡಿ ಮೆಯ್ದಡವುವಾಗೆನ್ನ ಮೆಯ್-ಮನವು
" ಹೊದ್ದಿದಂತಹ ಹಿಗ್ಗು ತಗ್ಗದೆಯೆ ಇರಲೆಂದೆ."
" ತನ್ನ ಮೆಲುಗೈಯಿಂದೆ ಉಣ್ಣಿಸುತ್ತಿರಲಮ್ಮ
" ಅನ್ನವದು ಎನಿತು ಸವಿಯೆನ್ನಿಸುವುದೋ? ಅಂತೆ
" ಇನ್ನಾರು ಉಣಿಸಿದರೆಯೂ ಅಮ್ಮನುಣಿಸಿದೊಲು
" ಚೆನ್ನಾಗುವಂತೆ ಮಾಡಲೆಬೇಕು ನೀನೆಂದೆ."

ಮತ್ತೆ ಎನಿತೆನಿತೊ ಮಾತನು ಕೇಳಿಕೊಂಡೆ.
"ವ್ಯರ್ಥವಿದು" ಎಂದರಿದು 'ಮರಳಿ ನಾ ಬಂದೆ.
ಹುಡುಗರಾಡುವ ಬೊಂಬೆಯಂತಿರುವನಾ ದೇವ;
ಕೊಡುವುದೇ ಆಕ್ಕನಾಟದ ಬೊಂಬೆ ಬೇಡಿದುದ?
ಪೊಡೆಮಡುತೆ ಕೈಮುಗಿದು ನಾನೀಗ ಬೇಡಿದುದು
ಹುಡುಗಾಟ ಹುಚ್ಚಾಟವೆಂದು ತಿಳಿದೆನು ಬಗೆದು.
ಹುಸಿಹೇಳಿ ಗುಡಿಗೆನ್ನ ಹೊರಡಿಸಿದುದೇಕೆಂದು
ಹಸನಾಗಿಯೆಲ್ಲವನು ಕಂಡುಕೊಂಡಿಹೆನಿಂದು
"ಮನೆಯಲಿರೆ ಬರಿದೆ ಇವ ಗುಣಗುಣಿಸುವನು" ಎಂದು
"ಬೇಡಿ ಏನೇನನೋ ಮೋಡಿಗೊಳುವನು" ಎಂದು
"ಕರೆದುಕೊಳು ಬಳಿಯಲ್ಲಿ ಎನುತೆ ಕಾಡುವ"ನೆಂದು
ಮರೆವುಗೊಳಿಸಲು ನನ್ನ ಹೊರಗೆ ಕಳುಹಿದೆ; ಅಹುದು!
ಬಿಡೆ! ತಿಳಿದೆನೆಲ್ಲ! ಹೇಳಿದೆಯೆ ಹುಸಿಯನ್ನ.
ಗುಡಿಯಲಿಹ ಕಲುಬೊಂಬೆ ದೇವನೇನವನು?
ಬೇಡಿದುದ ನೀಡದವ ದೇವನೆಂತಹನೆ?
ಬೇಡದೆಯೆ ನೀಕೊಡುವೆ ದಿಟ! ದೇವಿ ನೀನೆ!

---

# ಹೆದರಿಕೆ

→⊱ ⊰←

ಕರಿಗತ್ತಲಲಿ ನಾನು ಬಲುಬೆಚ್ಚಿ ಬೀಳುತಲಿ
ಬರುತಿರಲು ಕರಿಯ ಬಣ್ಣದುದೇನೊ ! ಎದುರಿನಲಿ
ಕದಲದೆಯೆ ನಿಂತುಕೊಂಡಿರುದ ನೋಡಿದೆನು.
ಹೆದರಿ ಅಲ್ಲಿಯೆ ನಿಂತೆ ಇಡದೆ 'ಅಡಿಗಳನು.
" ನನ್ನನಂಜಿಸಲೆಂದು ಅಕ್ಕನಾವಾಗಲೂ
" ಎನ್ನುತಿಹ ಕರಿಗುಮ್ಮ ಇದುವೆ ಏನೋ ! " ಎಂದೆ.
ಗುಮ್ಮ ನೆನಪಾಗೆ ಎದೆಯೊಡೆದು ಹೆದರಿದೆನು.
" ಅಮ್ಮ ! ಅಯ್ಯೋ ! ಬಾರೆ ! " ಎಂದು ಒದರಿದೆನು.
ನನ್ನ ಬಳಿಗೆಯೆ ಗುಮ್ಮ ಒರುವುದನು ನೋಡಿದೆನು.
" ಇನ್ನು ಇದು ನನ್ನ ನುಂಗುವುದೆಂದು " ನಡುಗಿದೆನು.
" ಗುಮ್ಮನಿದು ಬಂದು ನುಂಗುವುದು ನನ್ನನ್ನು.
" ಅಮ್ಮ ! ಗಡ ಬಿಡಿಸಿಕೊಳೆ ! " ಎಂದು ಕೂಗಿದೆನು.
ಕೂಗಿ ಕಣ್ಮುಚ್ಚಿ ಬೀದಿಯೊಳು ಬಿದ್ದುರುಳುತಿರೆ
ಆಗ ಗುಮ್ಮನೆ ಬಳಿಗೆ ಬಂದು ಮೈ ಮುಟ್ಟುತಿರೆ
ನಿನ್ನ ಕೈ ಸೋಂಕಿದೊಲು ಎನ್ನಿಸಿತು ನನಗೆ.
ಕಣ್ಣನೆರಡೂ ತೆರೆದು ನೋಡಿದೆನು ಮೇಗೆ.
ಕರಿಗುಮ್ಮನಾ ಕರಡಿಮೊಗವ ಕಾಣದೆ ಈಗ
ಮಿರುಗುತಿಹ ನಿನ್ನ ನಗೆಮೊಗವ ನೋಡುತಲಿರುವೆ.
ಮರುಳನಮ್ಮಾ ! ನಾನು ಕತ್ತಲೊಳು ನಿನ್ನನೇ
ಕರಿಗುಮ್ಮನೆಂದರಿದು ಎನಿತು ಹೆದರಿದೆನೆ ?

---

# ನಾನು-ಅಕ್ಕ



ನೀನಿತ್ತ ತಿನಿಸನ್ನು ಮಡಗಿಕೊಂಡುಡಿಯಲ್ಲಿ
ನಾನು ಅಕ್ಕನು “ಕೂಡಿ ಹೋಗುತಿರೆ ಹಾದಿಯಲಿ
ಕೈಯಿಲ್ಲದವರು ಕುಂಟರು ಕಳೆದಕಣ್ಣವರು
ಮೈಯಳವು ಮುಗಿದವರು ಮಾತಿಲ್ಲದವರು
ಬೀದಿಯಲಿ ಕುಳಿತು ಬರಿಮೆಯ್ ಬರಿಯ ಹೊಟ್ಟೆಯಲಿ
ಹೋದ-ಬಂದವರಿಗೆಲ್ಲರಿಗು ಕೈಮುಗಿಯುತಲಿ
“ ಹೊಟ್ಟೆಗಿಲ್ಲದೆ ಬಳಲುವೆವು ಮಾಡಿ ಧರ್ಮವನು !
“ ಕೊಟ್ಟುಹೋಗಿರಿ ! ಕರುಣೆಯಲಿ ಕಾಸುತಿಂಡಿಯನು ! ”
ದನಿದೆಗೆದು ದೈನ್ಯದಲಿ ಕೂಗಿಕೊಳುತಿರಲಿಂತು
ಮನದಿ ಮರುಕವು ಮೊಳೆದು “ ಅಯ್ಯೋ ” ಎಂದೆನ್ನಿಸಿತು.
“ ಇಲ್ಲಿ ನೋಡೇ ಅಕ್ಕ ಇವರು ಪಡುತಿಹ ಗೋಳು
“ ಇಲ್ಲವೇನೋ ? ಇವರಿಗನ್ನ ಅರಿವೆಗಳು.
“ ಹೊಟ್ಟೆ ಹಸಿದೊರಲುತಿರುವರು ಪಾಪ ! ಅದರಿಂದೆ
“ ಕೊಟ್ಟು ಬಿಡುವಾ ! ನಮ್ಮ ಬಳಿಯ ತಿನಿಸನು ” ಎಂದೆ.
“ ಮತ್ತೆ ಬೇಡಿದರೆ ಅಮ್ಮನು ನಮಗೆ ಕೊಡಳೇನು ?
“ ಕೊಟ್ಟು ಹೋಗುವ ! ಎಲ್ಲವನು ” ಎಂದೆ ನಾನು,
ನುಡಿಯ ಕೇಳುತೆ ಅಕ್ಕ ಸಿಡುಕು ಮೋರೆಯಮಾಡಿ
“ ನಡೆ ! ಕೊಡುವುದಿಲ್ಲ ನಾ ಸುಡುಗಾಡ ತಿರುಕರಿಗೆ
“ ನನಗೆ ತಿನಲೆಂದು ಕೊಟ್ಟಿಹಳಮ್ಮನಿದನು
“ ನಿನಗೆ ಬೇಕಿರಲು ಕೊಡು ! ನಿನ್ನ ತಿನಿಸನ್ನು ”
ಎನುತೆ ನುಡಿಯಲು ಅಕ್ಕ, ಮನದೊಳಗೆ ಯೋಚಿಸಿದೆ ;
“ ತಿನಿಸು ನನ್ನದು ತೀರ ಕೊಂಚವೇ ಬಳಿಯಲಿದೆ.

" ಇನಿತನೇ ಕೊಡಲು ಈ ಜನಕೆ ಸಾಲುವುದೇ ?
" ಇನಿತರಿಂದಲೆ ಇವರ ಮನವು ತಣಿಯುವುದೇ ?
" ಇನ್ನಿಷ್ಟು ಹೆಚ್ಚು ತಿನಿಸನ್ನು ತಂದಿದ್ದರೆಯು
" ಚೆನ್ನಾಗುತಿತ್ತು ಎಲ್ಲರಿಗದನು ಕೊಡುತಿದ್ದೆ.
" ನನಗಮ್ಮ ಹೆಚ್ಚು ಕೊಡಲಿಲ್ಲವೇತಕೊ ? " ಎಂದೆ;
" ಎನಿತೆನಿತೊ ಮಾತ ಮನದೊಳಗೆ ಯೋಚಿಸಿದೆ.
" ಹಂಚಿಕೆಯ ಕಾಣದಲೆ ಕೊಂಚಕೊಂಚವೆ ಅದನು
ಹಂಚಿಕೊಟ್ಟೆನು, ಅವರು ತಿನಲು ನಾ ಹಿಗ್ಗಿದೆನು.
ಇನ್ನೊಮ್ಮೆ ನನಗೀಯುವಾಗ ತಿನಿಸನು ನೀನು
ಇನ್ನಿಷ್ಟು ಹೆಚ್ಚಾಗಿಯೇ ಕೊಡುವೆಯೇನು ?

* * * * * * *

ನನ್ನಲಿಹ ತಿನಿಸೆಲ್ಲ ತೀರಿಹೋದುದ ಕಂಡು
ತನ್ನದನು ತೆಗೆದಕ್ಕ ಕೈಯೊಳೆ ಹಿಡಿದುಕೊಂಡು
ಆಣಕಿಸುತೆ ಆಸೆದೋರಿಸುತೆ ಬರುತಿರಲು
ಮೊನೆಯಾಗಿರುವ ಕಲ್ಲನೊಂದ ನೆಡಹಿದಳು.
ಎಡಹಿ ದಾರಿಯೊಳು ದಡಿಲನೆ ಬೀಳೆ, ಕೈಯಲ್ಲಿ
ಹಿಡಿದ ತಿನಿಸದು ಬೆರೆತು ಹೋಯ್ತು ಹುಡಿಮಣ್ಣಿನಲಿ.
ತೊಡೆದು ಹೋಯಿತು ಒಡಲಿಗೆಲ್ಲ ದಾರಿಯ ದೂಳಿ.
ಒಡನೆ ಎದ್ದಳು ಸಾವರಿಸಿಕೊಳುತೆ ಮರಳಿ.
ತೊಡೆದ ಹುಡಿಯನು ಕೊಡಹಿ ಒಡೆದ ಅಡಿಯನು ತೀಡಿ
ಹಿಡಿದ ತಿಂಡಿಯುದೆಲ್ಲ ಹೂಡಿಗೂಡಿದುದ ನೋಡಿ
ಪಡುತೆ ನಾಚಿಕೆಯನ್ನು ಕೆಡುಮೋರೆಯನು ಮಾಡಿ
ನಡೆದು ಬಂದಳು ಮತ್ತೆ ನನ್ನೊಡನೆ ಕೂಡಿ.
" ಬರಿದೆ ಹುಡಿಗೂಡಿತಯ್ಯೋ ! ನನ್ನ ತಿನಿಸೆಲ್ಲ ;
" ತಿರುಕರಿಗೆ ಕೊಟ್ಟಿದ್ದರಾದರೂ ಸರಿಯಿತ್ತು "
ಕಳವಳದಲಿಂತಕ್ಕನಾಡಿದಾ ನುಡಿಗೆ
ಬಲವಾದ ನಗೆ ತುಂಬಿಬಂದಿತಾ ! ನನಗೆ.

---

# ಹೇಗೆ ಬರಲಿ?

ಹೇಗೆ ನಾ ಬರಲಿ? ಹೇಳೀಗಲೇ ಅಮ್ಮಯ್ಯ!
ಬೇಗ ಕರೆಕೊಂಡು ಯಾವಾಗ ಮುದ್ದಿಡುವೆ?
ಜರಿಯ ಮುಂಡಿಗೆಯ ಮುಡಿದು ಮಿರುಗು-ಮೆಯ್ಮರೆತಳೆದು
ಕೊರಳ ಸರಪದಕ ಅರಳೆಲೆ ಹರಳಿನಲಿ ಹೊಳೆದು,
ನಡುವಿನಲಿ ಹೊಂಗೆಜ್ಜೆಯುಡುದಾರವನು ತೊಟ್ಟು
ಅಡಿಗಳಲಿ ಜಣಜಣನೆ ನುಡಿವ ನೇವುರವಿಟ್ಟು
ಬೆರಳ ಹೊನ್ನುಂಗುರದ ಬೆಳಕಬೀರುತಲೆ
ಅರಸುಮಗನಂತಾಗಿ ನಿನ್ನೆಡೆಗೆ ಬರಲೆ?
ಅಲ್ಲದೆಯೆ ನನ್ನ ಮೈಯೆಲ್ಲವೂ ಕಾಂಬಂತೆ
ಅಲ್ಲಲ್ಲಿ ಹರಿದಿರುವ ಮುಡಿಗೆ ಮೆಯ್ಮರೆ ತೊಡುತೆ
ನಾರ ಹುರಿಯನ್ನೆ ಉಡುದಾರದಂದದಿ ಬಿಗಿದು
ದಾರಿಯಾ ಹುಡಿ ಮೆಯ್ಗೆ ಸಾರಿಸಿದ ತೆರತೊಡೆದು
ಬರಿದು ಬರಿದಾದ ಕೈಕಾಲು ಕೊರಳಿನಲೆ
ತಿರುಕರಾ ಮಗುವಾಗಿ ನಿನ್ನೆಡೆಗೆ ಬರಲೆ?
ತಿರುಕನಾಗುವೆನೆನಲು ಮೋರೆಯನು ಮುರಿಯುವೆಯೆ?
ಅರಸುಮಗನಾಗಿ ಬಂದರೆಯೆ ನಿನಗದು ಸರಿಯೆ?
ಸರಿಯಾಗಿಯೇ ನಾನು ತಿರುಕರ ಹುಡುಗನಾಗೆ,
ಬರಗೊಡುವುದಿಲ್ಲವೇನಮ್ಮ ನನ್ನನು ಬಳಿಗೆ?
ಇರಲಿ! ಇನ್ನೊಮ್ಮೆ ಕರೆಕೊಳಲು ಬಾ! ನೀನು!
ಬರುವುದೇ ಇಲ್ಲ ನಿನ್ನಯ ಬಳಿಗೆ ನಾನು.

# ನೀನೇ ಬೇಕು!



ನೀನ ಬೇಕಾ! ನನಗೆ ನೀನೆ ಬೇಕು.
ಏನನಾದರು ಕೊಟ್ಟು ರಮಿಸುವುದು ಸಾಕು.
ನೆರೆದ ಗೆಳತಿಯರೊಡನೆ ಬೆರೆತು ಹೊರಗಾಡುತಲಿ,
ಸಿರಿವಂತಹುಡಿಗೆಯರ ಜರಿಯ್ಯುಡಿಗೆ ನೋಡುತಲಿ,
ನೋಡಿ "ಅಂತಹದೆ ತನಗೂ ಬೇಕು" ಎನ್ನುತಲಿ
ಓಡಿಬರುವಳು ಅಕ್ಕ ನಿನ್ನೆಡೆಗೆ ಬೇಡುತಲಿ.
ಕಾಡಿ ಅಳುತಳುತೆ ಹಟಮಾಡಿ ಹೊರಳುವಳು.
ಕೂಡೆ ನೀನದನುಡಿಸೆ ಹೊರಗೆ ತೆರಳುವಳು.
ಇನ್ನೊಮ್ಮೆ ಓಡೋಡಿ ನಿನ್ನೆಡೆಗೆ ಬರುತಕ್ಕ
"ಚಿನ್ನದಾ ಬಳೆಬೇಕು ರನ್ನದೋಲೆಯು ಬೇಕು
"ಹೊನ್ನಪೂಸರ ಬೇಕು ಬಣ್ಣಗುಪ್ಪಸ ಬೇಕು
"ಚೆನ್ನಾದ ಮುತ್ತು ಮಾಣಿಕದ ಮೂಗುತಿಬೇಕು"
ಎನ್ನುತಲಿ ನಿನ್ನನೆನಿತೆನಿತೊ ಕಾಡುವಳು.
ಇನ್ನು ನೀನವನಿಡಿಸೆ ಮತ್ತೆ ಓಡುವಳು.
ನೋಡಿದುದನೆಲ್ಲವನು ಬಯಸಿ, ನಿನ್ನಯ ಬಳಿಗೆ
ಓಡಿಬರುವಳು ಮತ್ತೆ ಮತ್ತೆ ಮೊದಲಿನ ಹಾಗೆ.
ಎನಿತ ನೀನಿತ್ತರೂ ಮನ ತಣಿಯದಕ್ಕನಿಗೆ.
ದಿನವೆಲ್ಲವೂ ಬಂದು ಕಾಡುವಳು. ಇಂತಾಗೆ
ಒಲ್ಲೆನಾನುಳಿದ ಒಡವೆಯ ಸುಟ್ಟುಹಾಕು!
ಎಲ್ಲ ಕೊಡಬಲ್ಲ ನೀನೇ ನನಗೆ ಬೇಕು!

---

# ಮಲೆಯ ಮರ

ಮುಗಿಲ ಮುಟ್ಟಕೆ ಬಳೆದ ಮಲೆಯ ಮೇಲೆಲ್ಲಿಯೋ!
ಮಿಗಿಲಾಗಿ ಹೂ ಬಿಡುವ ಮರವೊಂದಿರುವುದೆಂತೆ;
ಬೆಳಗಿನಲಿ ನೇಸರನು ತೊಳುಗುತಲಿ ಬರಲದಕೆ
ಅಳತೆಯಿರದನಿತು ಅರಳುಗಳು ಅರಳುವವೆಂತೆ;
ಕಂಪು ನಮ್ಮಂಗಳದ ಸಂಪಿಗೆಗೆ ಹಿರಿದೆಂತೆ;
ಸೊಂಪು ಮಿರುಗುವ ಮಿಸುನಿಗೆಂಪ ಮೀರುವುದೆಂತೆ;
  ಅರಳುಗಳ ನರುಗಂಪು ಗಾಳಿಯೊಳು ತೂರಿ,
  ಬರಿದೆ ಹೋಗುವುದೆಂತೆ ಮುಗಿಲೊಳಗೆ ಸೇರಿ.
ಹಗಲೆಲ್ಲ ಅರಳರಳಿ ನಗುತಿರುವ ಹೂವುಗಳು,
ಹಗಲು ಹೋಗಲು ಮೊಗವ ಮುಗಿದು ಬೀಳುವವೆಂತೆ;
ಅರಳನಾರಿಸಿ ತರುವರಾರಾರು ಇರರೆಂತೆ;
ಬರಿದೆ ಮಣ್ಣೊಳು ಬಿದ್ದು ಬೆರೆತು ಹೋಗುವವೆಂತೆ;
ಮರಿಮೋಡಗಳು ಮಾತ್ರ ತೆರಳಿ ಮೇಯಲಿಕಲ್ಲಿ
ತಿರುಗಾಡುತಿಹವೆಂತೆ ತೀರ ತುದಿಮಲೆಯಲ್ಲಿ.
  ಬೆರೆತು ನಾವಿಬ್ಬರೂ ಬೆಟ್ಟವನು ಸೇರಿ,
  ಅರಳನಾರಿಸಿ ತರುವ! ನಡೆ! ಮೇಲೆ ಏರಿ.
ಏರಲಿಕೆ ಮಲೆಯನಾರಾರಿಗೂ ಬರದೆಂತೆ;
ಏರಿಹೋಗುವ ಹದನ ಹೇಗೆ? ಹಾ! ಹಾ! ಅರಿತೆ.
ಮಲೆಗೆ ಮೇಯಲಿಕೆ ಮೋಡಗಳು ಹೋಗುವವಲೇ?
ಕುಳಿತುಕೊಳುವಾ! ಒಂದು ಮರಿಮೋಡದಾ ಮೇಲೆ.
ನಸುವು ನೋವಿಲ್ಲದೆಯೆ ಮಲೆಯ ಮೇಲೇರುವೆವು.
ಹೊಸತರದ ಹೂಬಿಡುವ ಮರದ ಬಳಿಸಾರುವೆವು.
  ಬೆರೆತು ನಾವಿಬ್ಬರೂ ಅರಳನಾರಿಸುವಾ!
  ಹೊರಲಾರದನಿತು ಬುಟ್ಟಿಯ ತುಂಬಿ ತರುವಾ!
ಬೇಗ ಕರೆಯಮ್ಮ! ಮರಿಮೋಡವೊಂದನ್ನು;
ಹೋಗುವಾ! ಹೂತರಲು, ತಡೆಯೇತಕಿನ್ನು?

# ನಿನ್ನ ನಡತೆ

ತಿನಿಸುದೊರೆಯದೆ ಒಡಲು ಒಣಗಿ ಬಡವಾದವರು
ಎನಿತೊ ತಿರುಕರು ಪಾಪ! ದಿನದಿನವು ಬರುತಿಹರು.
"ಒಳ್ಳಿತಾಗಲಿ" ಎಂದು ನಿನ್ನನೋಲೈಸುವರು.
"ಒಳ್ಳೆಹಸಿದಿಹೆ"ವೆಂದು ಒಡಲ ತೋರುವರು.
ಅಡಿಗೆ ತಲೆಬಾಗುವರು. ನಿಡುಸರದಿ ಕೂಗುವರು.
"ಹಿಡಿಯನ್ನ ಕೊಡಿ!" ಎಂದು ಎಡೆಬಿಡದೆ ಬೇಡುವರು.
ಬೇಡುವರು ಕಾಡುವರು ಮೋಡಿಯಲಿ ಕೂಡುವರು.
"ನೀಡಮ್ಮ!" ಎಂದು ಸರವೆತ್ತಿ ಹಾಡುವರು.
ಬೇಡಿದರೆ ಅವರನ್ನು ನೋಡದೆಯೆ ನೀನಿರುವೆ;
ಕಾಡಿದರೆ ಬಿರುನುಡಿಯನಾಡಿ "ನಡೆ! ನಡೆ!" ಎನುವೆ;
ಹಿಡಿಯನ್ನವನು ಕೂಡ ಕೊಡದೆ ಬರಿಗೈಯಲಿಯೆ
ಬಡವರನು ಮರಳಿಸುವೆ; ಇದು ನಿನಗೆ ಸರಿಯೆ?
ನನ್ನೊಡಲು ತುಂಬಿಹುದು ಅನ್ನ ಸಾಕಾಗಿಹುದು;
ತಿನ್ನುವುದು ಇನ್ನು ಬೇಡೆನ್ನುವಂತಾಗಿಹುದು;
ಒಲ್ಲೆನೆಂದರು ನನಗೆ ಇನ್ನಿಷ್ಟು ತಿನ್ನೆನುವೆ;
ಒಳ್ಳೆ ಬಲುಮೆಯಲಿ ನೀನುಣ್ಣಿಸಲು ಬರುವೆ.
ಅನ್ನವನು ಒಲ್ಲೆನೆನೆ "ಹಣ್ಣುಗಳ ಹಿಡಿ!" ಎನುವೆ.
ಹಣ್ಣೆನಗೆ ಸಾಕೆನಲು "ಹಾಲಕುಡಿ ಕುಡಿ!" ಎನುವೆ.
ಒಲ್ಲೆ ಹಾಲನು ಎನಲು ಇನ್ನೇನನೋ ಕೊಡುವೆ.
ಒಲ್ಲೆನೆಂದರು ಮತ್ತೆ "ತಿನ್ನು ತಿನ್ನೆ"ನುವೆ.
ಬೇಕೆಂಬ ಬಡವರನು ನೂಕಿ ಹೊಡೆದಟ್ಟುವೆಯೆ,
ಸಾಕೆಂದರೆಯು ನನಗೆ ಬಲುಮೆಯನು ಮಾಡುವೆಯೆ.
ಅಮ್ಮ! ಇದು ಏನೆ? ನಿನ್ನಯ ನಡತೆಯೆಂತಹದೆ?
ಒಮ್ಮೊಮ್ಮೆ ನನಗೆ ಬಲುನಗೆಯು ಬರುತಿಹುದೆ.

---

# ದೀವಳಿಗೆ

ಮುಂದೆ ದೀವಳಿಗೆ ಬರುವುದು ಭರುವುದೆಂದೆನಗೆ
ಎಂದಿನಿಂದಲೊ ಹುಸಿಯ ಹೇಳುತಿರುವೆಯೆ ಹಾಗೆ.
ಬಂದು ಹೋದುವು ಎನಿತೊ ಹುಣ್ಣಿಮೆ-ಅಮಾಸಿಗಳು.
ಸಂದು ಹೋದುವು ದಸರೆ-ಮಾನವಮಿ ಹಬ್ಬಗಳು.
ಬರಲಿಲ್ಲವೇಕಮ್ಮ ? ದೀವಳಿಗೆಯಿನ್ನೂ
ಬರಲೆಬಾರದು ಎಂದು ಬಗೆದಿರುವುದೇನು ?
" ಮುಗಿಯೆ ಮಳೆಗಾಲವಿದು ಮೋಡವೆಲ್ಲವು ತೆಗೆದು
" ಮುಗಿಲೆಲ್ಲ ಮಿನುಗುವುದು ; ಹಗಲು ಜಗಜಗಿಸುವುದು.
" ಬಗೆಬಗೆಯ ಬೆಳೆಯಿಂದೆ ಇಳೆಯೆಲ್ಲ ಹೇರುವುದು.
" ಸೊಗಸಿನಾ ದೀವಳಿಗೆ ಹಬ್ಬ ಬರುವುದು ಅಂದು "
ಹಗಲೆಲ್ಲ ಇಂತೆನಗೆ ಹೇಳುವೆಯೆ ನೀನು.
ಮುಗಿಯಲಿಲ್ಲವೆ ಕೆಟ್ಟ ಮಳೆಗಾಲವಿನ್ನೂ ?
ದೀವಳಿಗೆಯಾ ಹಬ್ಬ ಬರಲಂದು ಇರುಳಲ್ಲಿ
ದೀವಿಗೆಗಳೇ ಎಂತೆ ಎಲ್ಲಿ ನೋಡಿದರಲ್ಲಿ,
ಮನೆಯೊಳಗೆ ಹೊರಗೆ ಊರೊಳಗೆ ನಾಲ್ಕೂ ಕಡೆಗೆ,
ಜನರು ಬೆಳಗಿಸುವ ಸೊಡರೆನಿತೆನಿತೊ ಮಿನುಮಿನುಗೆ,
ಹರಿದು ಸುತ್ತಲು ಸೊಡರುಗಳ ಬೆಳಕು ತಾನೆ
ಇರುಳಲಿಯು ಕರಿಗತ್ತಲಿರದಲ್ಲವೇನೆ ?
" ಮುಂದೆ ದೀವಳಿಗೆ ಬರೆ ಹಗಲ ಪಂಜುಗಳನ್ನು
" ತಂದು ಕೊಡುವೆನು ನಿನಗೆ " ಎಂದು ಹೇಳಿದೆ ನೀನು.
ಹಗಲ ಪಂಜನು ಹಚ್ಚಿ ಹಬ್ಬದಿರುಳೆಲ್ಲವನು
ಹಗಲಿನೊಲು ಹೊಳೆಹೊಳೆಯುವಂತೆ ನಾ ಮಾಡುವೆನು.
ಕರಿಯ ಮೋರೆಯ ಇರುಳು ಇಲ್ಲದಂತಾಗೆ,
ಮರೆಯಾಗದಲ್ಲವೇ ನಿನ್ನ ಮೊಗವೆನಗೆ ?
ಬರಲೊಲ್ಲದೇಕಮ್ಮ ದೀವಳಿಗೆಯಿನ್ನೂ ?
ಬರುವುದಕೆ ಹಂಚಿಕೆಯ ನಾ ಮಾಡಲೇನು ?

---

# ಹಾಡು

-⁜ ⁜-

" ದನಿಯು ನಿನ್ನದು ಒಳ್ಳೆ ಇನಿದೆ"ನುತೆ ಬಣ್ಣಿಸುತೆ,
ಜನರೆಲ್ಲ ನೆರೆದು ಸವಿನುಡಿಯಾಡಿ ರಂಬಿಸುತೆ,
ಎನಿತೆನಿತೊ ತಿನಿಸುಗಳ ನಿನಗೀವೆವೆಂದೊರೆದು,
ನನಗೆ ಕಾಡುವರಮ್ಮ ಹಾಡುಗಳ ಹೇಳೆಂದು ;
  ನಾನವರ ಸವಿಮಾತುಗಳಿಗೆ ಮೆಚ್ಚುವೆನು ;
  ಏನೇನೊ ! ಮನಕೆ ಬಂದಂತೆ ಕೂಗುವೆನು.
ನಿನ್ನಂತೆಯೇ ಹಾಡಿ ನೆರೆದ ಮಂದಿಯ ಮನಕೆ
ಚೆನ್ನಾಗಿ ತಣಿವನೊದವಿಸಬೇಕು ! ಎಂದೆಣಿಕೆ ;
ಹವಣಿಸುವೆ ನಾನೆನಿತೊ ! ನಿನ್ನಂತೆ ಹಾಡಲಿಕೆ ;
ಸವಿಯೆ ತುಂಬದು ನಾನು ನುಡಿಯುವಾ ಸರಿಗಮಕೆ.
  ನಿನ್ನ ಕೊರಳದು ಏತರಿಂದೆ ಮಾಡಿಹುದೆ ?
  ಚಿನ್ನಕೋಗಿಲೆ ಹಿಲ್ಲಿ ಕುಳಿತು ಕುಕಿಲುವುದೆ ?
ಇರಲು ಹಾಗೆಯೆ ನಾನು ಹಾಡುಗಳ ಹೇಳುತ್ತೆ
ಕರಿಯ ಸೀರೆಯ ನಡುವೆ ಜರಿಯಹೂ ತೆಗೆದಂತೆ,
ಬರುವುದೊಮ್ಮೊಮ್ಮೆ ನುಡಿ ನಿನ್ನ ಮೆಲುದನಿಯಂತೆ ;
ಬರಲು ನೆರೆದವರು ತಲೆದೂಗುವರು ಬಣ್ಣಿಸುತೆ.
  ನನ್ನೆದೆಯು ಕೂಡ ನಸುವೇಳೆಯುರಳುವುದು.
  ನಿನ್ನಂತೆ ಹಾಡಲಿಕೆ ಬಂದಿತೆನಿಸುವುದು.
ಮರಳಿ ಆಗಲೆ ನನ್ನ ಮರುಳುತನ ಹೊಳೆಯುವುದು.
ಹುರುಳಿರದ ಗರುವನಾ ತಳೆದೆನೆಂದೆನಿಸುವುದು.
" ಬರುವುದೇ ಅಮ್ಮನಾ ಸರದಸವಿ ? " ಎಂದೆನುವೆ.
ತಿರುಗಿ ನಿನ್ನಂತೆಯೇ ಹಾಡಲಿಕೆ ಹವಣಿಸುವೆ.
  ನನ್ನ ಹಾಡೆಲ್ಲ ನಿನ್ನಂತೆ ಸವಿಯೆನಿಸುವೊಲು
  ಚೆನ್ನಾದ ಸರವ ತೆಗೆಯಲು ನನಗೆ ಹೇಳು !

---

# ಪ್ರ

ಹಾಡು ಹಾಡೆಂದು ಹೇಳಿದೆ; ಅದಕ್ಕೆ ಹಾಡಿದೆನು.
ನೋಡು ! ಇದರೊಳು ಒಪ್ಪು ತಪ್ಪು ಎನಿತೆಂಬುದನು.
ಅಕ್ಕನೆದುರಿಗೆ ಮೊನ್ನೆ ಇದನೆ ನಾ ಹಾಡಿದೆನು.
ನಕ್ಕು ನುಡಿದಳು ಆಕೆ; "ಏನು ಹಾಡಿದೆ ಮಣ್ಣು !
"ದನಿಯೊ ಧಾಟಿಯೊ ಮನವ ಬಿನದಿಸುವ ರಾಗಗಳೊ ?
"ಇನಿತಾದರೂ ಇಲ್ಲ, ಬರಿಯ ಕೋಣನ ಕೂಗು."
ಅಕ್ಕನೀ ತೆರದಿ ನುಡಿಯಲು ಮೂಗ ಮುರಿದು,
ಬಿಕ್ಕಿ ಅಳುವಂತಾಯಿತಮ್ಮ ! ನನಗಂದು.
"ಇನ್ನು ನಾನೆಂದೆಂದು ಹಾಡಬಾರದು" ಎಂದೆ.
ಇನ್ನೇನನೋ ಬಗೆದೆ, ಹಾಡುವುದ ನಿಲ್ಲಿಸಿದೆ.
"ಹಾಡನೊಂದಾದರೂ ಹೇಳು ಹೇಳೈ !" ಎಂದು
ಮಾಡುತಿರುವೆಯೆ ಒಳ್ಳೆ ಬಲುಮೆಯನು ನೀನಿಂದು.
ಹೇಗೆ ನಾ ಹಾಡಿದರು ಹಿಗ್ಗಿನಿಂದಾಲಿಸುವೆ.
ಜಾಗು ! ಭಲ ! ಭಲ ! ಎನುತೆ ಮೈದಡವಿ ಮುದ್ದಿಸುವೆ.
ಪಾಡು ಇದ್ದರೆಯು ಹೇಳುವಳಕ್ಕಕಾಡೆಂದು.
ಹಾಡೆನಮ್ಮಾ ! ಇನ್ನು ಅವಳೆದುರಿಗೊಂದು.
ಬೇಸರಿಯದಲೆ ಕುಳಿತು ನೀಕೇಳುವುದರಿಂದೆ
ಬೇಸರಿಕೆ ಬರದು ಹಾಡಲು ನನಗೆ, ಅದರಿಂದೆ
ಹಗಲು ಮುಗಿಯುವ ವರೆಗೆ ಇರುಳು ತೆರಳುವವರೆಗೆ,
ತೆಗೆದು ಬಲುಸರವನ್ನು ಮುಗಿಲ ಮುಟ್ಟುವ ಹಾಗೆ,
ನಿನ್ನ ಬಳಿಯಲಿ ಕುಳಿತು ಹಾಡಿಯೇ ಹಾಡುವೆನು.
ಇನ್ನು ತೆರೆದಿಹ ಬಾಯ ಮುಚ್ಚದೆಯೆ ನಾನಿಹೆನು.

---